# ದೊರೆಮಗಳ ವಿಷಯ ಒಂದು ಮಾತು

ವಿಶ್ವಸಾಹಿತ್ಯದಲ್ಲಿ ಮೊದಲನೆಯ ಪಂಕ್ತಿಯವನಾದ, ಇಂಗ್ಲಿಷ್ ಸಾಹಿತ್ಯದಲ್ಲಿ 'ಕನಿಷ್ಠಿಕಾಧಿಷ್ಠಿತ'ನಾದ ಶೇಕ್ಸ್‌ಪಿಯರ್ ಕವಿಯ ವಿಷಯವಾಗಿ ನಾವಿಲ್ಲಿ ಒಂದು ಕುಂಟುಪಂಕ್ತಿ ಬರೆದರೆ ಅದು ಸಮುದ್ರದಲ್ಲಿ ಒಂದು ತೊಟ್ಟು ನೀರಿಗಿಂತಲೂ ಕಡಿಮೆ. ಶೇಕ್ಸ್‌ಪಿಯರ್ ಕವಿ ಇಂಗ್ಲಿಷರ, ಇಂಗ್ಲಿಷ್ ಸಾಹಿತ್ಯದ ಜೀವಾಳ. ಹಾಗೆಂದು ಅವನ ಪರಿಮಿತಿ ಇಂಗ್ಲಿಷರಲ್ಲೇ, ಇಂಗ್ಲಿಷಿನಲ್ಲೇ ಉಳಿದಿಲ್ಲ. ಲೋಕದ ಸಾಹಿತ್ಯಿಕ ಭಾಷೆಗಳೆಲ್ಲ ಅವನನ್ನು ತನ್ನವನನ್ನಾಗಿ ಮಾಡಿಕೊಂಡುವು. ಎಂದರೆ, ಶೇಕ್ಸ್‌ಪಿಯರನ ನಾಟಕಗಳ ಭಾಷಾಂತರ, ರೂಪಾಂತರಗಳೂ, ಕಥಾರೂಪಗಳೂ, ಸಾರರೂಪಗಳೂ ಲೋಕದ ಪ್ರತಿಯೊಂದು ಭಾಷಾ ಸಾಹಿತ್ಯ ಭಂಡಾರವನ್ನು ಸುಗ್ಗಿಸಿದುವು.

ನಮ್ಮ ಕನ್ನಡದಲ್ಲೂ ಅಷ್ಟೆ! ಕನ್ನಡದ ಹಲವಾರು ವಿದ್ವಾಂಸರು ಶೇಕ್ಸ್‌ಪಿಯರನ ನಾಟಕಗಳನ್ನು ಇದ್ದಕ್ಕಿದ್ದಂತೆ, ಅಥವಾ ನಮ್ಮ ಪರಿಸ್ಥಿತಿಗೆ ಅಳವಡಿಸಿಕೊಂಡು ಕನ್ನಡಕ್ಕೆ ಇಳಿಸಿದರು. ಆ ಮಹಾ ನಾಟಕಗಳ ಸಾರವನ್ನು ಕಥಾರೂಪದಲ್ಲಿ ಕನ್ನಡಿಸಿದರು ಈ ಕಾರ್ಯ ಕನ್ನಡದ ನವ್ಯ ಸಾಹಿತ್ಯದ ಆರಂಭದಿಂದ ಪ್ರಾರಂಭವಾಗಿ ಇನ್ನೂ ಮುಂದುವರಿಯುತ್ತಿದೆ.

ಆ ಶೇಕ್ಸ್‌ಪಿಯರನ "ಎಸ್ ಯು ಲೈಕ್ ಇಟ್" ಎಂಬ ನಾಟಕದ ಕಥೆ ಇಲ್ಲಿ ದೊರೆಮಗಳ ರೂಪದಲ್ಲಿದೆ. "ಎಸ್ ಯು ಲೈಕ್ ಇಟ್" ನಾಟಕಕ್ಕೆ ದೊರೆಮಗಳ ರೂಪ ಕೊಡುವಾಗ ಕೊಡಗಿನವರಾದ ಭಾರತೀಸುತರು ಕೊಡಗಿನ ಸನ್ನಿವೇಶಕ್ಕೆ ಅಳವಡಿಸಿಕೊಂಡು ಕೊಡಗಿನ ದೊರೆ ಮಗಳೇ ಎಂಬ ಭ್ರಮೆ ಹುಟ್ಟುವಂತೆ ಚಿತ್ರಿಸಿರುವರು. ಆ ಚಿತ್ರಕ್ಕೆ ಸರಿಯಾದ ಹಿನ್ನೆಲೆ ಬಣ್ಣಗಳನ್ನೂ ಉಪಯೋಗಿಸಿರುವರು, ಎಂದರೆ ಪೂರ್ವಚಿತ್ರ ಭಾಷೆ ಶೈಲಿಗಳನ್ನು ನವೀನ ರೀತಿಯಿಂದ ಕೈಗೊಂಡಿರುವರು ಎಂದಿಷ್ಟು ಹೇಳಿದರೆ ಹೆಚ್ಚಾಗದೆಂದು ತೋರುತ್ತದೆ

"ಪ್ರಕಾಶಕರು"

# ಒಂದು

ಪೂರ್ವಕಾಲದಲ್ಲಿ ನಾವು ವಾಸಿಸುವ ಭರತವರ್ಷ ಅನೇಕ ಸಣ್ಣ ದೊಡ್ಡ ರಾಜ್ಯಗಳಾಗಿ ಹರಿಹಂಚಾಗಿದ್ದಿತು. ಈ ಬಗೆಯ ನೂರಾರು ನಾಡುಗಳಲ್ಲಿ ಕೊಡಗು ಒಂದು. ಆ ದೇಶದ ಉತ್ತರಭಾಗವನ್ನು ಚೆಂಗಾಳ್ವರು ಆಳುತಿದ್ದರು. ಕಾವೇರಿ ನದಿಯ ದಂಡೆಯಲ್ಲಿರತಕ್ಕ ಶ್ರೀರಂಗವೇ ಅವರ ರಾಜಧಾನಿ. ಶ್ರೀರಂಗ ಈಗ ಹಾಳುಬಿದ್ದ ಹಳ್ಳಿಯ ಕೊಂಪೆಯಾಗಿದ್ದರೂ, ಶತಮಾನಗಳ ಹಿಂದೆ, ಚೆಂಗಾಳ್ವರ ವೈಭವ ಕಾಲದಲ್ಲಿ ಅನೇಕ ಬೀದಿಗಳಿಂದಲೂ, ಉನ್ನತ ಸೌಧ ರಾಜಿಗಳಿಂದಲೂ ಕಂಗೊಳಿಸುತಿದ್ದ ಒಂದು ಸುಂದರ ನಗರವಾಗಿದ್ದಿತು.

ಆ ದಿನಗಳಲ್ಲಿ ಶ್ರೀರಂಗವನ್ನು ಗುಣವರ್ಮನೆಂಬ ಒಬ್ಬ ದೊರೆ ಆಳುತ್ತಿದ್ದ. ಗುಣವರ್ಮನೆಂಬ ಹೆಸರು ಆತನಿಗೆ ಅನ್ವರ್ಥವಾಗಿದ್ದಿತು. ದೊರೆಯ ಆಳ್ವಿಕೆ, ತಂದೆಯ ಪಾಲನೆಯಂತೆ ಪ್ರಜೆಗಳಿಗೆ ಹಿತಕರವಾಗಿದ್ದಿತು. ರಾಜನ ಬೆಳ್ಗೊಡೆಯ ನೆರಳಲ್ಲಿ ಪ್ರಜೆಗಳು, ನಲವು-ಸಂತಸಗಳ ಹಾಲ್ಜೇನು ಗಳನ್ನು ಉಣುತಿದ್ದರು. ಅರಸನು ದಯಾಳು, ಸದ್ಗುಣಿ ಮತ್ತು ನಿಷ್ಕಲಂಕ ಹೃದಯನಾಗಿದ್ದ. ವಂಚನೆ, ಕುಹಕತನ ಮತ್ತು ಕೃತ್ರಿಮಗಳನ್ನರಿಯದ ತಿಳಿಮನಸ್ಸು ಆತನದು.

ಗುಣವರ್ಮನಿಗೆ ಒಬ್ಬ ತಮ್ಮನಿದ್ದ. ಆತನನ್ನು ವೀರವರ್ಮನೆಂದು ಕರೆಯುತಿದ್ದರು. ದೊರೆ ತನ್ನ ಸೋದರನನ್ನು ಪ್ರೀತಿಸುತಿದ್ದ; ರಾಜ್ಯ ಭಾರದಲ್ಲಿ ಹಿರಿಯಪಾಲನ್ನು ಆತನಿಗೆ ಒಪ್ಪಿಸಿದ್ದ; ಆತನಲ್ಲಿ ಅಮಿತ ವಿಶ್ವಾಸವನ್ನು ಇರಿಸಿದ್ದ. ಆದರೆ ವೀರವರ್ಮನ ಗುಣಶೀಲಗಳು ದೊರೆಯ ಶೀಲಸ್ವಭಾವ ಗಳಿಗೆ ವ್ಯತಿರಿಕ್ತವಾಗಿದ್ದುವು. ಈ ಈರ್ವರು ಸೋದರರ ನಡತೆಗಳಲ್ಲಿ ಹಗಲು ರಾತ್ರಿಗಳ ನಡುವೆ ಇರುವುದಕ್ಕಿಂತಲೂ ಹೆಚ್ಚು ಅಂತರವಿದ್ದಿತು. ಅಣ್ಣನು ಸತ್ಯವಾದಿಯೂ ಪ್ರಜಾವತ್ಸಲನೂ ಆಗಿದ್ದರೆ, ತಮ್ಮ ಅಸತ್ಯವಾದಿಯೂ ಜನ ದ್ರೋಹಿಯೂ ಆಗಿದ್ದ. ಅಣ್ಣ ದಯಾರ್ದ್ರ ಹೃದಯನೂ ವಿಶಾಲ ಮನಸ್ಕನೂ ಆಗಿದ್ದರೆ, ತಮ್ಮ ಕ್ರೂರಸ್ವಭಾವಿಯೂ ಸಂಕುಚಿತ ಹೃದಯನೂ ಆಗಿದ್ದ. ಅಣ್ಣ ಸಹನೆ, ನಿರ್ಮಾತ್ಸರ್ಯ ಮತ್ತು ಔದಾರ್ಯಗಳ ಮೂರ್ತಿಮಂತ

ಸ್ವರೂಪನಾಗಿದ್ದರೆ, ತಮ್ಮ ಮತ್ಸರ ದ್ವೇಷ ಅಧಿಕಾರ ತೃಷ್ಣೆಗಳ ಆಗರವೆನಿಸಿದ್ದ. ಹೀಗೆ ಈರ್ವರ ಸ್ವಭಾವಗಳು ಹಗಲು ರಾತ್ರಿಗಳಂತೆ ಪರಸ್ಪರ ವಿರೋಧವಾಗಿದ್ದುವು. ಈ ಸೋದರರ ಗುಣನಡತೆಗಳಲ್ಲಿ ಎದ್ದು ಕಾಣುತ್ತಿದ್ದ ವ್ಯತ್ಯಾಸ, "ಕುಲವೊಂದಾದೊಡೆ ಶೀಲವೊಂದೆನಿಪುದೆ?" ಎಂಬ ನೀತಿ ಸೂಕ್ತಿಗೆ ಪ್ರತ್ಯಕ್ಷ ದೃಷ್ಟಾಂತವಾಗಿದ್ದಂತೆ ಭಾಸವಾಗುತಿದ್ದಿತು.

ವೀರವರ್ಮನ ಅಂತರಂಗದಲ್ಲಿ ಅಧಿಕಾರ ತೃಷ್ಣೆಯೆಂಬ ಕಾಳಸರ್ಪ ಹೆಡೆಯಾಡಿಸುತಿದ್ದಿತು. ಅದರ ಪ್ರೇರಣೆಗೆ ಒಳಗಾದ ತಮ್ಮ ಅಣ್ಣನ ಸಿಂಹಾಸನದ ಮೇಲೆ ಆಶಾಪೂರಿತ ದೃಷ್ಟಿಯನ್ನು ಹರಡತೊಡಗಿದ. ತಾನು ರಾಜಸಿಂಹಾಸನವನ್ನೇರಿ ಶಾಸನ ದಂಡವನ್ನು ಕೈಯಲ್ಲಿ ಹಿಡಿದು ನಾಡನ್ನು ಆಳಬೇಕೆಂಬ ಮಹತ್ವಾಕಾಂಕ್ಷೆ ಅವನ ಎದೆಯಲ್ಲಿ ಕೊನರಿ ಕುಡಿಬಿಡತೊಡಗಿತು. ವಂಚನೆ ಒಳಸಂಚುಗಳು ಉದ್ದೇಶ ಸಾಧನೆಗಿರುವ ಉಪಕರಣಗಳಾದುವು. ಅವನು ಕೃತ್ರಿಮ ಸಂಧಾನ ಕಾರಸ್ಥಾನಗಳ ಬಲೆಯನ್ನು ಹೆಣೆದು ನಾಡಿನ ಶಾಸನ ಚಕ್ರವನ್ನು ಸ್ವಾಧೀನಪಡಿಸಿಕೊಳ್ಳುವ ಕಾರ್ಯದಲ್ಲಿ ನಿರತನಾದ.

ವೀರವರ್ಮನು ಬಿತ್ತಿದ ಒಳಸಂಚಿನ ಬೀಜ ಮೊಳೆತು ಗಿಡವಾಯಿತು; ಚಿಗುರಿ ಮರವಾಗಿ ಫಲಕೊಡತೊಡಗಿತು. ಅವನು ಕುಟಿಲ ತಂತ್ರಗಳನ್ನು ಉಪಯೋಗಿಸಿ, ರಾಜದಂಡವನ್ನು ತನ್ನ ವಶಪಡಿಸಿಕೊಳ್ಳುವ ಕೃತ್ಯದಲ್ಲಿ ಗೆಲುವನ್ನು ಗಳಿಸಿದ. ಹೆಚ್ಚಿನ ಶ್ರಮವಿಲ್ಲದೆ ಅರಸನ ಗದ್ದುಗೆ ಅವನ ವಶವಾಯಿತು. ಒಂದು ದಿನ ಅಣ್ಣನನ್ನು ಸಿಂಹಾಸನದಿಂದ ಪದಚ್ಯುತಗೊಳಿಸಿ, ಅವನು ಗದ್ದುಗೆಯನ್ನೇರಿದ. ರಾಜಮುಕುಟ ಅವನ ನೆತ್ತಿಯನ್ನು ಅಲಂಕರಿಸಿತು. ಅವನು ಕೈಯಲ್ಲಿ ರಾಜದಂಡವನ್ನು ಹಿಡಿದು ತಾನೇ ನಾಡನ್ನು ಆಳತೊಡಗಿದ.

ಪದಚ್ಯುತನಾದ ಗುಣವರ್ಮ ನಾಡನ್ನು ತೊರೆಯಬೇಕಾಯಿತು. ನಾಡನ್ನು ಕಳಕೊಂಡ ದೊರೆಯನ್ನು ಕಾಡು ಸ್ವಾಗತಿಸಿತು. ಸ್ವಾಮಿನಿಷ್ಠರಾದ ಸರದಾರರನೇಕರು ತಮ್ಮ ದೊರೆಗೆ ಒದಗಿದ ವಿಪತ್ತನ್ನು ಕಂಡು ಪರಿತಪಿಸಿದರು. ತಮ್ಮ ದೊರೆ ಅರಮನೆಯ ಸುಖಭೋಗಗಳಿಂದ ವಿದೂರನಾಗಿ ಕಾನನದ ಕಷ್ಟಮಯ ಜೀವನವನ್ನು ಕೈಗೊಂಡಿರುವಾಗ, ತಾವು ತಮ್ಮ ಮನೆಮಠಗಳಲ್ಲಿ ಉಂಬಳಿ ಜಹಗೀರುಗಳ ಉತ್ಪತ್ತಿಗಳನ್ನು ಉಣ್ಣುತ್ತಾ ಸುಖದಲ್ಲಿ ಕಾಲಯಾಪನೆ ಮಾಡಲು ಈ ಸ್ವಾಮಿ ಭಕ್ತರ ಮನ ಒಪ್ಪದಾಯಿತು. ಅವರು ಮನೆಮಠಗಳನ್ನು, ಜಹಗೀರು ಉಂಬಳಿಗಳನ್ನು ತ್ಯಜಿಸಿ, ತಮ್ಮ ಸ್ವಾಮಿಯ ಕಷ್ಟ

ಸಂಕಟಗಳಲ್ಲಿ ಪಾಲುಗಾರರಾಗಲು ಮುಂದಾದರು. ರಾಜ್ಯಾಪಹಾರಿ ವೀರವರ್ಮ ಈ ಸ್ವಾಮಿನಿಷ್ಠರ ಉಂಬಳಿ ಜಹಗೀರುಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳ ಆದಾಯವನ್ನು ಅನುಭವಿಸತೊಡಗಿದ.

"ಸಂಪತ್ತು ಗೆಳೆಯರನ್ನು ಕಲೆಹಾಕುವುದು; ಬಡತನ ಗೆಳೆಯರ ಗುಣವನ್ನು ಪರೀಕ್ಷಿಸಲಿರುವ ಒರೆಗಲ್ಲು" ಎಂಬುದು ಪ್ರಾಜ್ಞರು ಜನರಿಗೆ ಸಾರಿದ ವಿವೇಕವಾಣಿಯಾಗಿದೆ ರಾಜ್ಯಭ್ರಷ್ಟ ದೊರೆಗೆ ಈ ವಿವೇಕಸೂಕ್ತಿಯ ಸತ್ಯವನ್ನು ಪರೀಕ್ಷಿಸುವ ಸಂದರ್ಭವನ್ನು ದೈವ ಒದಗಿಸಿಕೊಟ್ಟಿತು. ತನ್ನನ್ನು ಓಲೈಸುವ ಆಳುಗಳಲ್ಲಿ, ಆಶ್ರಿತರಲ್ಲಿ ನಿಷ್ಕಪಟಬುದ್ಧಿಯುಳ್ಳ ನಿರ್ಮಲಚಿತ್ತರು ಯಾರು; ತನ್ನ ದುಃಖ ಸಂಕಟಗಳಲ್ಲಿಯೂ ಸಹ ಸಮಪಾಲು ಬೇಡುವ ಆಪ್ತ ಮಿತ್ರರು ಯಾರು ಎಂಬುದನ್ನು ಅರಿವ ಸುವರ್ಣಾವಕಾಶ ದೊರೆಗೆ ಪ್ರಾಪ್ತವಾಯಿತು.

ನಾಡಿನ ಗಡಿಯಾಚೆ ಹುಗುಗೂರು ಎಂಬ ಹೆಸರಿನ ಭೀಕರ ಕಾನನವಿದೆ. ಹುಲಿ ಕರಡಿ ತೋಳಗಳ ನೆಲೆವೀಡದು. ಹರಿಣ, ಸಾರಂಗ ಕಡವೆ ಮೊದಲಾದ ಸಸ್ಯಾಹಾರಿ ಜೀವಿಗಳ ಆವಾಸ ಭೂಮಿಯುದು. ನಾಗರ ಹಾವು, ಹೆಬ್ಬಾವು, ಕರಿಹಾವು ಹೀಗೆ ಬಗೆಬಗೆಯ ಉರಗ ಸಂಕುಲಗಳಿಗೆ ಆ ಕಾಡು ಆಸರೆಯಾಗಿತ್ತು. ಗಿಳಿ, ಗೊರವಂಕ, ಕೋಗಿಲೆ ಮೊದಲಾದ ಬಗೆಬಗೆಯ ಹಕ್ಕಿಗಳು ಆ ಕಾಡಿನಲ್ಲಿ ವಾಸಿಸುತ್ತಾ, ತಮ್ಮ ಸವಿಗೊರಲ ಇಂಚರಗಳಿಂದ ಕಾಡನ್ನು ಗಂಧರ್ವರ ನಾಡನ್ನಾಗಿ ಮಾಡುತಿದ್ದುವು. ಬಾನಿನಲ್ಲಿ ತೇಲುವ ಕಾರ್ಮುಗಿಲುಗಳನ್ನು ಮುದ್ದಿಡುವ ಹೆಮ್ಮರಗಳು ಅಲ್ಲಿ ತಲೆಯೆತ್ತಿ ನಿಂತಿದ್ದುವು. ನೇಸರು ಕಿರಣಗಳನ್ನು ಎಲೆಗಳ ಸಂದಿನಲ್ಲಿ ಇಣಿಕಿ ನೋಡಲು ಎಡೆಗೊಡದಂತೆ, ಬಳ್ಳಿ ಬೀಳಲು ಪೊದೆಗಳು ದಟ್ಟವಾಗಿ ಬೆಳೆದಿದ್ದುವು.

ನಾಡು ಕಾಡಾಗಿ ಪರಿಣಮಿಸಿದ ರಾಜ್ಯಭ್ರಷ್ಟ ದೊರೆಗೆ, ಕಾಡೇ ನಾಡಾಯಿತು. ವಿಶಾಲ ವೃಕ್ಷಗಳ ಶೀತಲ ಛಾಯೆಯಲ್ಲಿ ಹರಹಿದ ಹಾಸುಗಲ್ಲುಗಳೇ ದೊರೆಯ ಸಿಂಹಾಸನಗಳಾದುವು. ನಾಲ್ದೆಸೆಗಳಿಗೆ ಕೊಂಬೆಗಳನ್ನು ಹರಹಿ ತಳಿರು ತೊಂಗಲುಗಳ ತಣ್ಣೆಳಲನ್ನೀವ ಹೆಮ್ಮರಗಳೇ ರಾಜತ್ವ ಸೂಚಕವಾದ ಬೆಳ್ಗೊಡೆಗಳಾದುವು. ಹಂಸ ಕೇಕಿಗಳ ರೆಕ್ಕೆಗಳೇ ಚಾಮರಗಳಾದುವು. ಅರಣ್ಯದಲ್ಲಿ ಸಂಚರಿಸುವಾಗ ಆಧಾರವಾಗಿರಲೆಂದು ಕೈಯಲ್ಲಿ ಹಿಡಿದ ವೇತ್ರದಂಡವೇ ರಾಜದಂಡವಾಯಿತು. ಪ್ರಾತಃಕಾಲ ಮರಗಳ ಕೊಂಬೆಗಳನ್ನಡರಿ

ಸವಿಗೊರಲಲ್ಲಿ ಹಾಡುವ ಕೋಗಿಲೆಗಳ ಮಧುರ ಗೀತೆಗಳೇ ವೈತಾಳಿಕರ ಸ್ತುತಿ ಗೀತೆಗಳಾದುವು. ಕಾನನದಲ್ಲಿ ವಾಸಿಸುವ ಹರಿಣ ಸಾರಂಗಗಳ ವೃಂದವೇ, ದೊರೆಯ ಪಾಲನೆಗೆ ಒಳಗಾದ ಪ್ರಜಾಸಂಕುಲವಾಯಿತು. ವನದ ಸಾಧು ಸತ್ವಗಳನ್ನು ಹಿಂಸಿಸುವ ವ್ಯಾಘ್ರ-ವೃಕಗಳೇ ಅರಸನ ಶಾಸನಕ್ಕೊಳಗಾದ ದುಷ್ಟ ಸತ್ವಗಳಾದುವು. ಹೀಗೆ ನಾಡನ್ನು ಬಿಟ್ಟ ದೊರೆಯನ್ನು ರಾಜ್ಯಲಕ್ಷ್ಮಿ ತೊರೆಯ ಲಿಲ್ಲ; ಅವಳು ಅರಸನನ್ನು ಅನುಸರಿಸಿ ಅಡವಿಯನ್ನು ಸೇರಿದವಳು; ಅಲ್ಲಿಯೂ ಅವನನ್ನು ಓಲೈಸಿದಳು.

ಗುಣವರ್ಮ ತನ್ನನ್ನು ನಚ್ಚಿ ಬಂದ ಗೆಳೆಯರೊಡನೆ, ಆಶ್ರಿತ ಸರದಾರ ರೊಡನೆ ಹುದುಗೂರು ಅರಣ್ಯದಲ್ಲಿ ದಿನಗಳನ್ನು ಕಳೆಯತೊಡಗಿದ. ರಾಜಾ ಸ್ಥಾನದ ವಿಲಾಸವೈಭವಗಳು ಅಲ್ಲಿರಲಿಲ್ಲ; ಬೆಡಗುಬಿನ್ನಾಣಗಳ ಹೊಳಪು ಅಲ್ಲಿ ಕಣ್ಣುಕುಕ್ಕಿಸುತ್ತಿರಲಿಲ್ಲ. ಆದರೆ ಅರಣ್ಯದ ಶಾಂತಮಯ ಜೀವನ ಅವರಿಗೆ ತಂಬೆಲರ ತೀಟದಂತೆ ಆಹ್ಲಾದಕರವೆನಿಸಿತು. ಕೃತ್ರಿಮ ವಂಚನೆಗಳ ಕಿಲುಬು ಸೋಂಕದ ನಿಷ್ಕಲಂಕ ಜೀವನ ಅರಮನೆಯ ಆಡಂಬರದ ಬದುಕಿಗಿಂತಲೂ ನೂರ್ಮಡಿ ಸವಿಸಂತಸಗಳನ್ನಿತ್ತಿತು. ನಾಡನ್ನಾಳುವ ಹೊಣೆ ಹೆಗಲ ಮೇಲಿ ರದ ಸರದಾರರು, ವಿನೋದ ಕೇಳಿಗಳಲ್ಲಿ ವೇಳೆಯನ್ನು ಕಳೆಯುತಿದ್ದರು. ದೊರೆಯ ಅಡವಿ ಬಾಳಿನ ಸುಖಸಂತೋಷಗಳ ಕತೆಯನ್ನು ಕೇಳಿದ ಆಸ್ಥಾನಿಕರ ನೇಕರಿಗೆ ಅರಮನೆಯ ವೈಭವಾಡಂಬರಗಳು ನೀರಸವಾಗಿ ತೋರತೊಡಗಿ ದುವು. ಅವರು ವೀರವರ್ಮನ ಆಸ್ಥಾನವನ್ನು ತೊರೆದು ಹುದುಗೂರು ಅಡವಿಯ ಹಾದಿಯನ್ನು ಹಿಡಿದರು; ಪದಚ್ಯುತರಾಜನನ್ನು ಆಶ್ರಯಿಸಿದರು. ದಿನಕಳೆದಂತೆ ಅರಸನ ಸಂಸಾರ ವಿಪುಲವಾಗುತ್ತಾ ಬಂದಿತು.

ಗುಣವರ್ಮನ ಒಡನಾಡಿಗಳು ಬೇಸಿಗೆಯಲ್ಲಿ ಹೆಮ್ಮರಗಳ ತಣ್ಣೆಳಲಲ್ಲಿ ಮಲಗಿ, ವನ ಕುಸುಮಗಳ ಸೌರಭವನ್ನು ಹೊತ್ತು ಆಯಾಸದಿಂದ ಮೆಲ್ಲನೆ ಬೀಸುವ ಮಂದಾನಿಲನಿಗೆ ಮೈಯೊಡ್ಡುವರು; ತಮ್ಮ ದಣಿವು ಬಳಲಿಕೆಗಳನ್ನು ಪರಿಹರಿಸಿಕೊಳ್ಳುವರು. ಹಸಿವೆಯಾದಾಗ ಅವರು ಕಾಡುಜಿಂಕೆ ಕಡವೆಗಳನ್ನು ಬೆನ್ನಟ್ಟಿ ಹೋಗಿ ಬೇಟೆಯಾಡುವರು; ಆ ಮೃಗಗಳನ್ನು ಕೊಂದು ಮಾಂಸ ವನ್ನು ತರುವರು; ಕಾಡುಹಣ್ಣುಗಳನ್ನು ತಿರಿದು ತರುವರು; ಈ ವಸ್ತುಗಳ ನ್ನುಂಡು ತಮ್ಮ ಹಸಿವೆಯನ್ನು ಪರಿಹರಿಸಿಕೊಳ್ಳುವರು. ಆದರೆ ದೊರೆಗೆ ಅರಣ್ಯ ರಾಜ್ಯದ ಪ್ರಜೆಗಳಾದ ಜಿಂಕೆ ಸಾರಂಗಗಳ ಮೇಲೆ ಕೈಮಾಡಿ ಅವುಗಳನ್ನು

ಕೊಲ್ಲಲು ಮನವೊಪ್ಪದು. ಅವನು ಆಗಾಗ "ಈ ಹುಲ್ಲೆಹರಿಣಗಳು ಅರಣ್ಯಾ ರಾಜ್ಯದ ಪ್ರಜೆಗಳು. ಅವುಗಳ ನಾಡನ್ನು ಆಕ್ರಮಿಸಿ, ಈ ಸಾಧುಸತ್ವಗಳನ್ನು ಆಹಾರಕ್ಕೋಸುಗ ವಧಿಸುವುದು ನನ್ನ ಸೋದರ ವೀರವರ್ಮನು ಗೈದ ರಾಜ್ಯಾ ಪಹಾರಕ್ಕಿಂತಲೂ ಘೋರವಾದುದು ಮತ್ತು ನೀಚವಾದುದು!" ಎಂದು ತನ್ನ ಸಂಗಡಿಗರಿಗೆ ಹೇಳುತ್ತಿದ್ದ.

ಹೇಮಂತ ಋತುವಿನಲ್ಲಿ ಕುಳಿರ್ಗಾಳಿ ಬೀಸಿ, ದೊರೆಯ ಮೈಯನ್ನು ಸೋಂಕಿ, ತಾನು ರಾಜ್ಯ ವೈಭವಗಳನ್ನು ಕಳಕೊಂಡ ದುರ್ವಿಧಿಯನ್ನು ಅವನ ಸ್ಮರಣೆಗೆ ತರುತಿದ್ದಿತು. ಆದರೆ ದೊರೆ ಮಾಗಿಯ ಕಷ್ಟಸಂಕಟಗಳನ್ನು ನಗು ಮೊಗದಿಂದಲೇ ಸಹಿಸಿಕೊಳ್ಳುತ್ತಿದ್ದ. ಬಡಗಣ ಚಳಿಗಾಳಿ ಅವನ ಮೈಯನ್ನು ಸೋಂಕಿ, ಅರಳಿ ಎಲೆಯಂತೆ ಅವನ ದೇಹವನ್ನು ನಡುಗಿಸಿದಾಗ ಅವನು, "ಈ ಚಳಿಗಾಳಿಗಳು ಆಸ್ಥಾನದ ಹೊಗಳು ಭಟ್ಟರಿಗಿಂತ ನೂರು ಪಾಲು ಮೇಲು! ಈ ಚಳಿಗಾಳಿಗಳೇ ನನ್ನ ನಿಜವಾದ ಮಂತ್ರಿಗಳು. ಏಕೆಂದರೆ ಅವು ನನ್ನ ನಿಜಸ್ಥಿತಿಯೇನೆಂಬುದನ್ನು ಮರೆಮಾಜದೆ ನನಗೆ ಅರುಹುತ್ತವೆ. ಅವು ನನ್ನನ್ನು ಸೋಂಕಿ ಪೀಡಿಸಿದರೂ ಅವುಗಳ ಸ್ಪರ್ಶ ಕೃತಘ್ನರ ಮತ್ತು ವಿಶ್ವಾಸವಂಚಕರ ಸ್ಪರ್ಶದಷ್ಟು ಕ್ರೂರವೂ ಭಯಾನಕವೂ ಅಲ್ಲ. ಪ್ರತಿಕೂಲ ದೈವದುರ್ವಿಧಿಗಳನ್ನು ಜನರು ಎಷ್ಟೇ ಹಳಿದರೂ, ಅವುಗಳಿಂದ ನಾವು ಅನೇಕ ಪ್ರಯೋಜನಗಳನ್ನು ಹೊಂದಬಹುದು. ವಿಷಭರಿತವಾದ ಕಾಳಸರ್ಪದ ಹೆಡೆ ಯಲ್ಲಿ ಅಮೂಲ್ಯವಾದ ರತ್ನವಿರುವಂತೆ, ನಮ್ಮನ್ನು ದುಃಖಸಂಕಟಗಳ ಮಡುವಿ ನಲ್ಲಿ ದೂಡುವ ದುರ್ದೈವದಲ್ಲಿಯೂ ಸಹ ಒಂದು ಮಹತ್ತರವಾದ ಹಿತವಿದೆ." ಎಂಬ ಉದ್ಗಾರವನ್ನು ಎತ್ತುತಿದ್ದ.

ತಾನು ನೋಡುವ ಪ್ರತಿಯೊಂದು ವಸ್ತುವಿನಲ್ಲಿಯೂ ಒಂದು ಉದಾತ್ತ ನೀತಿಯನ್ನು ಕಾಣುವುದು ರಾಜ್ಯಭ್ರಷ್ಟದೊರೆಯ ಸ್ವಭಾವವಾಗಿದ್ದಿತು. ಅರಣ್ಯ ದಲ್ಲಿ ಬೆಳೆದು ನಿಂತ ತರುಲತೆಗಳ ಚಿಗುರುಗಳಲ್ಲಿ ಅವನು ನೀತಿ ವಚನಗಳನ್ನು ಸಾರಿಹೇಳುವ ನಾಲಗೆಗಳನ್ನು ನೋಡಿದನು. ಮಂಜುಳನಾದವನ್ನು ಎಸಗುತ್ತಾ ಮಂದವಾಗಿ ಹರಿವ ಕಾವೇರಿ ನದಿಯಲ್ಲಿ, ಅವನು ಯುಗಯುಗಾಂತರಗಳಿಂದ ಅವಿಚ್ಛಿನ್ನವಾಗಿ ಹರಿದು ಬರುವ ಜ್ಞಾನಗಂಗೆಯ ದರ್ಶನವನ್ನು ಮಾಡಿದ; ಮಳೆಗಾಳಿ ಬಿಸಿಲುಗಳಿಗೆ ಕೊರೆಯದೆ, ಕೋಡದೆ, ಬರಿಯದೆ ಯುಗಾಂತರ ಗಳಿಂದ ತಲೆಯೆತ್ತಿ ನಿಂತ ಬಂಡೆಗಲ್ಲುಗಳಲ್ಲಿ ದಿವ್ಯ ತತ್ವಸಂದೇಶಗಳನ್ನು ಓದಿದ.

ಹೀಗೆ ಕಾನನದಲ್ಲಿ ಪದಚ್ಯುತ ದೊರೆಯ ಬಾಳುವೆ ಸಾಗುತಿದ್ದಿತು.

# ಎರಡು

ರಾಜ್ಯಭ್ರಷ್ಟ ದೊರೆಗೆ ಒಬ್ಬಳು ಮಗಳಿದ್ದಳು. ಆಕೆ ಚೆಲುವೆ. ಚೆಲುವಿಗಿಂತಲೂ ಮಿಗಿಲಾದುದು ಆಕೆಯ ಗುಣ. ಅವಳ ಹೆಸರು ನೀಲಾಂಬಿಕೆ. ರೂಪಗುಣಗಳೆರಡೂ ಆಕೆಯಲ್ಲಿ ಬೆರೆತುದರಿಂದ ಬಂಗಾರದ ಹೂವಿಗೆ ಕಂಪು ಒದಗಿದಂತಾಗಿತ್ತು. ತಂದೆಯಿಂದ ಬಳುವಳಿಯಾಗಿ ಬಂದ ಉತ್ತಮ ಗುಣ, ವಿನಯ ಸದಾಚಾರಗಳು ಆಕೆಯಲ್ಲಿ ಮೊಳೆತು ಕೊನರಿ ಕುಡಿಬಿಡುತ್ತಿದ್ದುವು. ಸದ್ಗುಣಗಳಿಂದ ಬೆಳಗುವ ಆ ಹೆಣ್ಣು ತಂದೆಯ ಕಣ್ಮಣಿಯಾಗಿದ್ದಳು. ತಂದೆ ರಾಜ್ಯವನ್ನು ಕಳಕೊಂಡು ನಾಡನ್ನು ತೊರೆಯಬೇಕಾಗಿ ಬಂದಾಗ,—ಅವಳಿಗೆ ನೆತ್ತಿಯ ಮೇಲೆ ಆಗಸವೇ ಕಳಚಿಬಿದ್ದಂತಾಯಿತು. ಅರಮನೆಯ ಸುಖವಾಸವನ್ನು ತೊರೆದು ತಂದೆಯನ್ನು ಹಿಂಬಾಲಿಸಬೇಕೆಂದೂ, ಅದು ತನ್ನ ಕರ್ತವ್ಯವೆಂದೂ ಅವಳು ಬಗೆದಳು. ತಂದೆಯಿಲ್ಲದ ಅರಮನೆ ಹಾಳೂರಿನ ಹಾಳು ಗುಡಿಸಲಿಗಿಂತಲೂ ಆಕೆಗೆ ಬೇಸರಿಕೆಯನ್ನು ನೀಡಿತು. ಆದರೆ ನಾಡಿನ ಹೊಸ ದೊರೆ ಅವಳ ಚಿಕ್ಕಪ್ಪ ವೀರವರ್ಮ ನೀಲಾಂಬಿಕೆಯನ್ನು ಅರಮನೆಯಿಂದ ಹೊರಕಳುಹಲು ಒಪ್ಪದಾದ.

ವೀರವರ್ಮನಿಗೂ ಒಬ್ಬ ಕುಮಾರಿಯಿದ್ದಳು. ಅವಳ ಹೆಸರು ಮಾದಲಾಂಬಿಕೆ. ತಾವರೆ ಕೆಸರಲ್ಲಿ ಹುಟ್ಟಿಯೂ ಹೂಗಳ ರಾಣಿಯೆಂಬ ಖ್ಯಾತಿಯನ್ನು ಪಡೆಯಿತು. ಅಂತೆಯೇ ದುಷ್ಟನಾದ ತಂದೆಯ ಬಸಿರಲ್ಲಿ ಹುಟ್ಟಿ ಬಂದರೂ ಮಾದಲಾಂಬಿಕೆ ಸದ್ಗುಣಗಳಿಗೆ ಆಗರವೆಂಬ ನೆಗಳ್ತೆವಡೆದಳು. ತಂದೆಯಲ್ಲಿ ನೆಲಸಿದ್ದ ವಂಚನೆ, ಕೃತ್ರಿಮ, ಸ್ವಾರ್ಥತತ್ಪರತೆ, ಅತಿಕಾಂಕ್ಷೆ ಮೊದಲಾದ ಯಾವ ದುರ್ಗುಣಗಳೂ ಅವಳನ್ನು ಸೋಂಕಿರಲಿಲ್ಲ. ಅವಳು ಸೌಜನ್ಯ, ಸೌಶೀಲ್ಯ, ದಯೆ ಮೊದಲಾದ ದಿವ್ಯ ಗುಣಗಳಿಗೆ ಆಶ್ರಯವೆನಿಸಿದ್ದಳು.

ಮಾದಲಾಂಬಿಕೆಯ ಗುಣಶೀಲಗಳು ರೂಪುಗೊಳ್ಳಲು ನೀಲಾಂಬಿಕೆ ಕಾರಣಳಾಗಿದ್ದಳು. ಈರ್ವರು ಹೆಣ್ಣುಗಳು ಸಮಪ್ರಾಯದವರಾಗಿದ್ದರು. ಅವರು ಎಳೆ ಹರಯದಿಂದಲೇ ಒಡನಾಡಿಗಳಾಗಿ ಬಳೆದರು. ಅವರು ಒಂದೇ ಹೊಂದಟ್ಟೆಯಿಂದ ಒಟ್ಟಿಗೆ ಉಣುತ್ತಿದ್ದರು; ಒಟ್ಟಿಗೆ ಆಡುತ್ತಿದ್ದರು; ಇರುಳು ಒಂದೇ ಹಾಸಿಗೆಯಲ್ಲಿ ಮಲಗುತ್ತಿದ್ದರು. ಒಬ್ಬರು ಇನ್ನೊಬ್ಬರನ್ನು ಬಿಟ್ಟು ಅರೆಕ್ಷಣವಿರುತ್ತಿರಲಿಲ್ಲ. ಅಕ್ಕ-ತಂಗಿಯರಲ್ಲಿ ಸಹ ತೋರಿ ಬರದ ಪ್ರೇಮ

ಅನ್ಯೋನ್ಯತೆಗಳು ಕೊನರಿ ಕುಡಿಯೊಡೆದು, ಆ ಎರಡು ಜೀವಗಳನ್ನು ಬಂಧಿಸಿದ್ದುವು. ದೇಹವೆರಡಾದರೂ ಜೀವ ಒಂದು ಎಂಬ ನುಡಿಯಂತೆ ಅವರ ಇರವು ಇತ್ತು.

ನೀಲಾಂಬಿಕೆಯ ಮೇಲೆ ವೀರವರ್ಮನಿಗೆ ಮಮತೆಯೇನೂ ಇರಲಿಲ್ಲ. ಅವಳನ್ನು ಕಾಡಿಗಟ್ಟಲು ಅವನಿಗೆ ಬೇಸರವೂ ಇಲ್ಲ. ಆದರೆ ಮಗಳ ಮೇಲಿದ್ದ ಪ್ರೇಮ ಅವನನ್ನು ತಡೆದು ನಿಲ್ಲಿಸಿತು. "ನೀಲಾಂಬಿಕೆಯ ಅಗಲಿಕೆ ನನ್ನ ಕುಮಾರಿಯನ್ನು ದುಃಖ ಸಂತಾಪಗಳಿಗೆ ಈಡು ಮಾಡಬಹುದು. ಆ ಹೆಣ್ಣಿಂದ ನನ್ನ ಗದ್ದುಗೆಗೆ ಯಾವ ಅಪಾಯವೂ ಒದಗದು. ನನ್ನ ಮಗಳಿಗೆ ಒಡನಾಡಿ ಯಾಗಿ ಅವಳು ಅರಮನೆಯಲ್ಲಿರಲಿ" ಎಂದು ಅವನು ಆಲೋಚಿಸಿದ. ಅವನು ನೀಲಾಂಬಿಕೆಯನ್ನು ತಂದೆಯನ್ನು ಹಿಂಬಾಲಿಸಿ, ಕಾಡಿಗೆ ತೆರಳಲು ಅನುಮತಿಸದೆ, ಅರಮನೆಯಲ್ಲಿಯೇ ಉಳಿಸಿಕೊಂಡ.

ರಾಜ್ಯಕ್ಕೋಸ್ಕರ ತಮ್ಮ ತಂದೆಯರಲ್ಲಿ ಸಂಭವಿಸಿದ ಮನಸ್ತಾಪ ಕಲಹ ಗಳು ಈ ಗೆಳತಿಯರ ಪ್ರೇಮದ ಹಾಲಿನಲ್ಲಿ ಹುಳಿಹಿಂಡಲಿಲ್ಲ. ತಾನು ರಾಜ ಕುಮಾರಿಯಾದೆ, ಗದ್ದುಗೆಗೆ ಹಕ್ಕುದಾರಿಣಿಯಾದೆ ಎಂದು ಮಾದಲಾಂಬಿಕೆ ಹೆಮ್ಮೆ ಪಡಲಿಲ್ಲ. ತನ್ನ ತಂದೆ ದೊಡ್ಡಪ್ಪನಿಗೆ ಅನ್ಯಾಯ ಮಾಡಿ, ಅವನ ರಾಜ್ಯವನ್ನು ಕಸಿದುಕೊಂಡುದನ್ನು ಅವಳ ನಿರ್ಮಲಚಿತ್ತ ಒಪ್ಪಲಿಲ್ಲ. ಈ ಅನ್ಯಾಯದಿಂದ ಆದ ಕೇಡನ್ನು ತನ್ನ ಶಕ್ತಿಗನುಸಾರವಾದ ರೀತಿಯಲ್ಲಿ ನಿವಾರಿ ಸುವುದು ತನ್ನ ಕರ್ತವ್ಯವೆಂದು ಅವಳು ಭಾವಿಸಿದಳು. ಆದುದರಿಂದ ನೀಲಾಂಬಿಕೆಯ ಬೇಸರ ದುಃಖಗಳು ಶಾಂತವಾಗುವಂತೆ ಅವಳು ಉಪಚರಿಸು ತ್ತಿದ್ದಳು; ಪ್ರೇಮಪೂರ್ಣ ವಚನಗಳಿಂದ ಅಕ್ಕನ ಮನದಳಲ ಉರಿಯನ್ನು ತಣಿಸುತ್ತಿದ್ದಳು; ತಂದೆಯ ಅಗಲಿಕೆಯ ದುಃಖದಿಂದ ನೀಲಾಂಬಿಕೆ ಖಿನ್ನಳಾಗ ದಂತೆ ಜಾಗ್ರತೆ ವಹಿಸುತಿದ್ದಳು. ಅಕ್ಕನ ಮೊಗದಲ್ಲಿ ಎಳೆನಗೆಯ ಹೂಬಿಸಿಲು ಕಳೆಯಾಡಿದರೆ, ಅದು ಮಾದಲಾಂಬಿಕೆಯ ಹೃದಯ ಮಂದಾರವನ್ನು ಅರಳಿ ಸುತ್ತಿದ್ದಿತು.

ಒಂದು ದಿನ ನೀಲಾಂಬಿಕೆ ರಾಜ್ಯಭ್ರಷ್ಟನಾದ ತಂದೆಯನ್ನು ನೆನೆಯುತ್ತಾ ಚಿಂತಾಕುಲೆಯಾಗಿದ್ದಳು. ಅಕ್ಕನ ಮೊಗವನ್ನು ಚಿಂತೆಯ ಮೋಡ ಕವಿದಿರು ವುದನ್ನು ಮಾದಲಾಂಬಿಕೆ ಗುರುತಿಸಿದಳು. ಆಗ ಅವಳು "ಅಕ್ಕ, ನೀನು ದೊಡ್ಡಪ್ಪನನ್ನು ದಿನವಿಡೀ ನೆನೆಯುತ್ತಾ ಕೊರಗಬೇಡ. ಹುದುಗೂರು

ಅರಣ್ಯ ಅರಮನೆಗಿಂತ ಸುಖಮಯವಾಗಿದೆಯಂತೆ. ಅರಣ್ಯವಾಸದ ಸೊಬಗು ಸೊಗಗಳಿಗೆ ಮನಸೋತು ನಮ್ಮ ಓಲಗದ ಸಭಿಕರು ಒಬ್ಬೊಬ್ಬರಾಗಿ ನಾಡನ್ನು ತೊರೆದು ಕಾಡನ್ನು ಸೇರುತ್ತಿರುವರಂತೆ. ಅಲ್ಲಿ ದೊಡ್ಡಪ್ಪನಿಗೆ ಯಾವ ಕೇಡೂ ಒದಗದು." ಎಂದು ಸಮಾಧಾನದ ಮಾತನ್ನು ಆಡಿದಳು.

"ಮಾದಲೆ, ಅಪ್ಪ ಕಾಡನ್ನು ಸೇರಿದರೂ, ಆತನಿಗೆ ಕಾಡೇ ನಾಡಾಗುವುದು ಎಂಬುದನ್ನು ನಾನು ಬಲ್ಲೆ." ನೀಲಾಂಬಿಕೆಯು ಎದೆಯಿಂದ ಬಿಸಿಯುಸಿರೊಂದು ಹೊಮ್ಮಿತು. "ಆದರೆ ಕಾಡಿನಲ್ಲಿ ಅಲೆದು ದಣಿದಾಗ ಆತನ ಕಾಲುಗಳನ್ನು ತಡವಲು ಸಮಾಪದಲ್ಲಿ ನಾನಿಲ್ಲವಲ್ಲ ಎಂದು ನನ್ನ ಎದೆಕೊರಗುವುದು. ತಂದೆಯಿಲ್ಲದ ಅರಮನೆ ನನಗೆ ಕಾಡಿನಂತೆ ತೋರುವುದು."

"ನಿನ್ನ ಪಕ್ಕದಲ್ಲಿ ನಾನಿಲ್ಲವೇ ಅಕ್ಕ?" ಮಾದಲಾಂಬಿಕೆ ಮಾರ್ನುಡಿದಳು. "ನಾನೂ ನಿನಗೆ ಬೇಡವಾದೆನೆ?"

"ಮಾದಲೆ, ಮಡುವಿನಲ್ಲಿ ಮುಳುಗುವವನಿಗೆ ಹಲಗೆ ತುಂಡೊಂದು ದೊರೆತಂತೆ, ನನ್ನ ಪಾಲಿಗೆ ನೀನಿದ್ದೀಯೆ. ನೀನು ಇರುವುದರಿಂದಲೇ ನಾನಿಲ್ಲಿ ಬದುಕಿದ್ದೇನೆ. ಮೋಡ ಕವಿದ ಬಾಂದಳದಲ್ಲಿಯೂ ತಾರೆಗಳನ್ನು ಕಾಣುತಿದ್ದೇನೆ."

ಅನಿತರಲ್ಲಿ ಒಬ್ಬ ದೂತ ರಾಜ ಸನ್ನಿಧಿಯಿಂದ ರಾಜಕುಮಾರಿಯರಿದ್ದೆಡೆಗೆ ಬಂದ. ಅವನು ರಾಜಕುಮಾರಿಯರಿಗೆ, "ಇಂದು ಓಲಗದಲ್ಲಿ ಒಂದು ಜಟ್ಟಿಕಾಳಗ ನಡೆಯಲಿದೆ. ತಾವು ಮಲ್ಲಯುದ್ಧವನ್ನು ನೋಡ ಬಯಸುವಿರಾದರೆ ಈಗಲೇ ಬರಬೇಕೆಂದು ದೊರೆಗಳ ಅಪ್ಪಣೆಯಾಗಿದೆ" ಎಂದು ರಾಜಸಂದೇಶವನ್ನು ಅರುಹಿದ.

ಮಲ್ಲಯುದ್ಧವನ್ನು ನೋಡುವುದರಿಂದ ನೀಲಾಂಬಿಕೆಯ ಮನಸ್ಸನ್ನು ಕವಿದ ಚಿಂತೆ ಪರಿಹಾರವಾಗಬಹುದೆಂದು ಮಾದಲಾಂಬಿಕೆ ಆಲೋಚಿಸಿದಳು. ಆದುದರಿಂದ ಅವಳು ಅಕ್ಕನ ಹೆಗಲಮೇಲೆ ತೋಳನ್ನಿರಿಸಿ, "ಅಕ್ಕ ಆಸ್ಥಾನದಲ್ಲಿ ಜಟ್ಟಿಕಾಳಗ ನಡೆಯುವುದಂತೆ. ಬಾ, ನಾವು ಅದನ್ನು ನೋಡೋಣ. ನಮ್ಮ ಬೇಸರಿಕೆಯನ್ನಾದರೂ ಜಟ್ಟಿಕಾಳಗದ ಸಂಭ್ರಮದ ಗಾಳಿಗೊಡ್ಡೋಣ" ಎಂದು ಉಸುರಿದಳು.

ಜಟ್ಟಿಕಾಳಗವನ್ನು ನೋಡಲು ನೀಲಾಂಬಿಕೆಗೆ ವಿಶೇಷ ಕುತೂಹಲವಿರಲಿಲ್ಲ. ಆದರೆ ತಾನು ಹೋಗದಿದ್ದರೆ ಮಾದಲೆಯೂ ಹೋಗಲಾರಳು

ಎಂಬುದನ್ನು ಅವಳು ಬಲ್ಲಳು. ತಂಗಿಯ ಉತ್ಸಾಹಕ್ಕೆ ಭಂಗ ತರಬಾರದೆಂದು ಉದ್ದೇಶಿಸಿ ತಾನೂ ಅವಳೊಡನೆ ಮಲ್ಲಯುದ್ಧವನ್ನು ನೋಡಲು ಆಸ್ಥಾನಕ್ಕೆ ತೆರಳಲು ಒಪ್ಪಿದಳು.

ಹಿಂದಿನ ದಿನಗಳಲ್ಲಿ ರಾಜರ ಮತ್ತು ಪಾಳೆಯಗಾರರ ಆಸ್ಥಾನಗಳಲ್ಲಿ ಜಟ್ಟಿಕಾಳಗಗಳನ್ನು ನಡೆಸುವುದು ಒಂದು ಸಂಪ್ರದಾಯವಾಗಿದ್ದಿತು. ಅರಸರು ಮತ್ತು ಪಾಳೆಯಗಾರರು ಅನೇಕ ಜಟ್ಟಿಗಳಿಗೆ ಉಂಬಳಿ ಮತ್ತು ಜಹಗೀರು ಗಳನ್ನು ಕೊಟ್ಟು ತಮ್ಮ ಆಸ್ಥಾನಗಳಲ್ಲಿ ಇರಿಸಿಕೊಳ್ಳುತ್ತಿದ್ದರು; ಜಟ್ಟಿಗಳಿಗೆ ಸಂಬಳ ಸಾರಿಗೆಗಳನ್ನು ಕೊಟ್ಟು ಅವರನ್ನು ಪೋಷಿಸುತಿದ್ದರು. ಹಬ್ಬ, ಹುಣ್ಣಿಮೆ, ವರ್ಧಂತಿ ಇತ್ಯಾದಿ ವಿಶೇಷ ದಿನಗಳಲ್ಲಿ ಅವರು ಆಸ್ಥಾನದಲ್ಲಿ ಜಟ್ಟಿ ಕಾಳಗಗಳನ್ನು ಏರ್ಪಡಿಸುತಿದ್ದರು. ಈ ಮಲ್ಲಯುದ್ಧಗಳನ್ನು ನೋಡಲು ಆಸ್ಥಾನದ ಸಭಿಕರೂ, ಪ್ರಜೆಗಳೂ ನೆರೆಯುತಿದ್ದುದು ಮಾತ್ರವಲ್ಲದೆ ಅಂತಃಪುರದ ನಾರಿಯರೂ ಬರುತ್ತಿದ್ದರು. ಈ ಬಗೆಯ ಮಲ್ಲಯುದ್ಧವೊಂದು ಆ ದಿನ ನಡೆಯುವುದಿತ್ತು. ಅದನ್ನು ನೋಡಲೆಂದು ನೀಲಾಂಬಿಕೆ ಮಾದಲಾಂಬಿಕೆ ಯರು ರಾಜಾಸ್ಥಾನಕ್ಕೆ ತೆರಳಿದರು.

ರಾಜ ಕುಮಾರಿಯರು ಆ ದಿನ ಕಾದಲಿರುವ ಮಲ್ಲರನ್ನು ನೋಡಿ ದೊಡನೆಯೇ ಆ ಜಟ್ಟಿಕಾಳಗ ಒಂದು ದುರಂತ ನಾಟಕವಾಗಿ ಕೊನೆ ಗೊಳ್ಳುವುದೆಂದು ಊಹಿಸಿದರು. ಸ್ಪರ್ಧಿಗಳಲ್ಲಿ ಒಬ್ಬ ಅರಮನೆಯಿಂದ ಪೋಷಿತನಾದ ಮಲ್ಲ. ಅವನ ಹೆಸರು ಚೆಲುವಯ್ಯನೆಂದು. ಅವನ ತೋಳುಗಳು ಆನೆಯ ಕಾಲುಗಳಂತೆ ದಪ್ಪವಾಗಿದ್ದು ಬಲಿಷ್ಠವಾಗಿದ್ದುವು. ಎದೆ ಹಾಸುಗಲ್ಲಿನಂತೆ ವಿಶಾಲವಾಗಿದ್ದಿತು. ತೊಡೆಗಳು ಮರದ ಕಾಂಡ ಗಳನ್ನು ಹೋಲುತಿದ್ದುವು. ಹಿಂದೆ ಅವನು ಮಲ್ಲ ಕಾಳಗಗಳಲ್ಲಿ ಅನೇಕ ಜಟ್ಟಿಗಳನ್ನು ಸದೆದು ವಿಶೇಷ ಪಾರಿತೋಷಕಗಳನ್ನು ಗಳಿಸಿದ್ದ. ಅವನೊಡನೆ ಹೋರಲು ನಾಡಿನ ಇತರ ಮಲ್ಲರು ಅಳುಕುತ್ತಿದ್ದರು. ಎಷ್ಟೋ ಜಟ್ಟಿಗಳ ಕೈಕಾಲುಗಳನ್ನು ಸಣ್ಣ ಕಡ್ಡಿಗಳನ್ನು ಬೆರಳುಗಳಿಂದ ಮುರಿಯುವಷ್ಟು ಸುಲಭ ದಲ್ಲಿ ಮುರಿದು ಅವನು ನೆಲಕ್ಕಪ್ಪಳಿಸಿದ್ದ. ಅವನೊಡನೆ ಪ್ರತಿಸ್ಪರ್ಧಿಸಲು ನಿಂತವನು ಇನ್ನೂ ಹುಡುಗ. ಅವನ ತುಟಿಗಳ ಮೇಲೆ ಆಗ ತಾನೇ ಮೀಸೆ ಮೊಳೆಯುತಿದ್ದಿತು. ಅವನ ಕೈಕಾಲುಗಳು ನೀಳವಾಗಿದ್ದುವು. ಮೊಗ ಚೆಲುವಾದುದು. ಅವನ ಎಳೆಯ ಪ್ರಾಯ, ಮಲ್ಲಯುದ್ಧದಲ್ಲಿ ಅವನಿಗೆ

ಅನುಭವವಿಲ್ಲದಿರುವುದು, ಇವೆಲ್ಲವನ್ನು ನೋಡಿ ಜನರು ಈ ಕಾಳಗದಲ್ಲಿ ಅವನು ಸುಲಭವಾಗಿ ಕೊಲ್ಲಲ್ಪಡುವನು ಎಂದು ಎಣಿಸಿದರು. ಅವನು ಭೀಮ ಬಲನಾದ ಚೆಲುವಯ್ಯನೊಡನೆ ಕಾಳಗಕ್ಕೆ ನಿಲ್ಲಬಾರದಿತ್ತು ಎಂದು ಆಡಿ ಕೊಂಡರು. ಯುವಕನ ಪ್ರಾಯ, ಸುಂದರಾಕಾರಗಳನ್ನು ನೋಡಿ ಜನರು ಮರುಕಗೊಂಡರು. ಕಠಿಣ ಹೃದಯನಾದ ವೀರವರ್ಮನ ಎದೆ ಸಹ ದಯೆ ಯಿಂದ ಮಾರ್ದವವಾಯಿತು. ಅವನು ತರುಣನನ್ನು ಸನಿಹಕ್ಕೆ ಕರೆದು, "ನೋಡು, ಚೆಲುವಯ್ಯ ನಿನಗೆ ಸಮದಂಡಿಯಲ್ಲ. ಈ ಮಲ್ಲಕಾಳಗದಲ್ಲಿ ನಿನ್ನ ಜೀವ ಉಳಿಯುವಂತಿಲ್ಲ. ನಿನ್ನ ಎಳೆಯ ಪ್ರಾಯವನ್ನು ಕಾಣುವಾಗ ನನಗೆ ಕನಿಕರವಾಗುತ್ತದೆ. ಆದುದರಿಂದ ಮಲ್ಲಯುದ್ಧದಿಂದ ಹಿಂದೆಗೆ" ಎಂದು ಹೇಳಿದ.

"ಮಹಾ ಪ್ರಭೂ! ತಾವು ತೋರಿದ ಕರುಣೆಗೆ ನಾನು ಕೃತಜ್ಞ" ತರುಣ ಅರಿಕೆಮಾಡಿದ. "ನಾನು ಭೂಮಿಗೆ ಹೊರೆಯಾಗಿದ್ದೇನೆ. ಮಡಿದರೆ ನನಗೋಸ್ಕರ ಮರುಗುವವರು ಯಾರೂ ಇಲ್ಲ. ಗೆದ್ದರೆ ಯಶಸ್ಸು ಸಿಗುವುದು. ಆದುದರಿಂದ ಕಾಳಗದಿಂದ ನಾನು ವಿಮುಖನಾಗಲಾರೆ."

ನೀಲಾಂಬಿಕೆ, ಮಾದಲಾಂಬಿಕೆಯರು ಓಲಗಕ್ಕೆ ಬಂದುದನ್ನು ವೀರವರ್ಮ ನೋಡಿದ. ಅವನು ಅವರನ್ನು ಮಾತಾಡಿಸುತ್ತಾ, "ಮಾದಲೆ, ಮತ್ತು ನೀಲಾ, ನೀವು ಮಲ್ಲಯುದ್ಧವನ್ನು ನೋಡಲೆಂದು ಬಂದಿರಾ? ಇಂದಿನ ಕಾಳಗ ಹೆಚ್ಚಿಗೆ ಸ್ವಾರಸ್ಯವಾಗಿರದು. ಇದು ಸಮದಂಡಿಯ ಕಾಳಗವಾಗದು. ಚೆಲುವಯ್ಯನೊಡನೆ ಸೆಣಸಲು ನಿಂತಿರುವ ಆ ಹುಡುಗನನ್ನು ನೋಡುವಾಗ ನಾನು ಕನಿಕರಿಸುತ್ತೇನೆ. ಕಾಳಗದಿಂದ ಹಿಂದೆಗೆಯುವಂತೆ ನಾನು ಹೇಳಿ ನೋಡಿದೆ. ಆದರೆ ನನ್ನ ನುಡಿಯನ್ನು ಆತನು ಕೇಳನು. ನೀವು ಅವನನ್ನು ಮಾತಾಡಿಸಿನೋಡಿ. ಅವನನ್ನು ಕಾಳಗದಿಂದ ಹಿಂದೆಗೆಯುವಂತೆ ಮಾಡಿ" ಎಂದು ಹೇಳಿದ.

ತರುಣನೊಬ್ಬನ ಪ್ರಾಣವನ್ನು ರಕ್ಷಿಸುವ ದಯಾನ್ವಿತ ಕಾರ್ಯವನ್ನೆಸ ಗಲು ಅವಕಾಶವನ್ನು ಒದಗಿಸುವ ಆಣತಿಯನ್ನು ಈಡೇರಿಸಲು ರಾಜಕುಮಾರಿ ಯರು ಸಂತೋಷಗೊಂಡರು. ಅವರು ಸೇವಕನೊಬ್ಬನನ್ನು ಅಟ್ಟಿ ತರುಣ ನನ್ನು ತಮ್ಮೆಡೆಗೆ ಬರಮಾಡಿಕೊಂಡರು. ನೀಲಾಂಬಿಕೆ ತರುಣನನ್ನು ನಿಟ್ಟಿಸಿ ನೋಡಿದಳು. ಅವನ ಮುಖ ಗಂಭೀರವಾಗಿದ್ದಿತು. ವಿಶಾಲವಾದ ನೇತ್ರಗಳು

ನಿಷ್ಕಲಂಕತೆಯ ಹೊಳಪನ್ನು ಹೊರಚೆಲ್ಲುತಿದ್ದುವು. ಕುರುಳುಗೂದಲು ಹಣೆಯ ಮೇಲೆ ಲಾಸ್ಯವಾಡುತಿದ್ದಿತು. ಹರವಾದ ಎದೆ ತಾನು ಧೈರ್ಯಕಲಿತನಗಳಿಗೆ ಆಸರೆಗೊಟ್ಟಿರುವೆನೆಂದು ನುಡಿಯುತಿದ್ದಿತು. ನೀಳವಾದ ತೋಳುಗಳು ಶಕ್ತಿಸಂಪನ್ನವಾಗಿದ್ದುವು. ಆ ಮೈಯನ್ನು ಸಾಮಾನ್ಯ ತೊಡಿಗೆಗಳು ಮುಚ್ಚಿದ್ದುವು. ಆದರೂ, ಅವನ ಮುಖಭಾವ, — ಕಣ್ಣುಗಳ ಹೊಳಪು ಆತ ಸಾಮಾನ್ಯರ ಗುಂಪಿಗೆ ಸೇರಿದವನಲ್ಲ ಎಂಬುದನ್ನು ಸೂಚಿಸುತಿದ್ದುವು.

"ನಿನ್ನ ಧೈರ್ಯ ಉತ್ಸಾಹಗಳು ನಿನ್ನ ಎಳೆಯ ಪ್ರಾಯಕ್ಕೆ ಮಿಗಿಲಾದುವು." ಮಾದಲಾಂಬಿಕೆ ಮೊದಲು ತರುಣನನ್ನು ಮಾತಾಡಿಸಿದಳು. "ಆದರೆ ನೀನು ಓಲಗದ ಮಲ್ಲ ಚೆಲುವಯ್ಯನಿಗೆ ಸಾಟಿಯಲ್ಲ. ಅವನು ಎಂತಹ ಕ್ರೂರ ಕರ್ಮಿ ಮತ್ತು ಬಲಾಢ್ಯನೆಂಬುದರ ನಿದರ್ಶನಗಳನ್ನು ನೀನು ಕಣ್ಣಾರೆ ಕಾಣಬಲ್ಲೆ. ಅವನೆಷ್ಟು ಮಂದಿ ಮಲ್ಲರನ್ನು ಸದೆಬಡಿದಿರುವನೆಂಬುದನ್ನು ತಿಳಿದಿದ್ದರೆ ನಿನ್ನ ವಿವೇಕ ಸಮುದಂಡಿಯಾದ ಕಾಳಗವನ್ನೇ ಅರಸಲು ಪ್ರೇರಿಸುತಿದ್ದಿತು. ನಿನ್ನ ಪ್ರಾಣರಕ್ಷಣೆಗೋಸ್ಕರ ನಾವು ನಿನ್ನ ಹಿತವನ್ನು ಚಿಂತಿಸಿ, ಈ ಮಲ್ಲಯುದ್ಧದಿಂದ ಹಿಂದೆಗೆಯಬೇಕೆಂದು ಕೋರುತ್ತೇವೆ."

"ನೋಡು, ನೀನು ಮಲ್ಲಯುದ್ಧದಿಂದ ಹಿಂಜರಿದರೆ ನಿನ್ನ ಕೀರ್ತಿಗೇನೂ ಕಳಂಕತಟ್ಟದು." ನೀಲಾಂಬಿಕೆ ತಂಗಿಯ ಮಾತಿಗೆ ದನಿಗೂಡಿಸಿದಳು. "ನಾವು ದೊರೆಗೆ ಹೇಳಿ ಇಂದು ಏರ್ಪಡಿಸಿದ ಕಾಳಗದ ವ್ಯವಸ್ಥೆಯನ್ನೇ ತೆಗೆದು ಹಾಕುವಂತೆ ಮಾಡುವೆವು. ನಿನ್ನಂತಹ ಎಳೆಯ ತರುಣ ಇನ್ನು ಹಲಕಾಲ ಬದುಕಿ ಬಾಳಬೇಕಾಗಿದೆ. ನೀನಾಗಿಯೇ ಕೊರಳನ್ನು ಸಾವಿನ ಉರುಳಿಗೆ ಒಡ್ಡುವುದು ಅನ್ಯಾಯ."

"ರಾಜಕುಮಾರಿಯರೇ, ನೀವು ನನಗೆ ಕಾಳಗದಿಂದ ಹಿಂದೆಗೆಯಬೇಕೆಂದು ಹೇಳಿ ನನ್ನನ್ನು ಅವಮಾನವೆಂಬ ದಂಡನೆಗೆ ಗುರಿಪಡಿಸದಿರಿ. ಈ ಒಂದು ಕಾರ್ಯವನ್ನಲ್ಲದೆ ಬೇರೆಯಾವ ಕೆಲಸವನ್ನು ಹೇಳಿದರೂ ನಾನು ಪ್ರತಿಯಾಡದೆ ನೆತ್ತಿಯಲ್ಲಿ ಆಂತುಕೊಳ್ಳುವೆನು."

"ಮಲ್ಲಯುದ್ಧವನ್ನು ಮಾಡಿಯೇ ತೀರಬೇಕೆಂಬ ಹಟವೇಕೆ?" — ನೀಲಾಂಬಿಕೆ ಪ್ರಶ್ನಿಸಿದಳು. "ಅದನ್ನು ತೊರೆದರೆ ನಿನಗೆ ಆಗುವ ಹಾನಿಯೇನು?"

"ಅರಗುವರಿ, ನನ್ನ ಬಾಳ್ವೆಯೇ ಒಂದು ದುಃಖದ ಕತೆಯಾಗಿದೆ." ತರುಣ ವಿನೀತ ಸ್ವರದಲ್ಲಿ ಮಾರ್ನುಡಿದ. ನಾನು ಕಾಳಗದಲ್ಲಿ ಸೋತರೆ

ಅದಕ್ಕೋಸ್ಕರ ನಾಚಿಕೆಯಿಂದ ತಲೆತಗ್ಗಿಸುವವರು ಯಾರೂ ಇಲ್ಲ. ನಾನು ಮಡಿದರೆ, ಅದಕ್ಕೋಸ್ಕರ ಕಂಬನಿ ಸುರಿಸಿ, ಮರುಗುವವರು ಯಾರೂ ಇರರು. ನನ್ನ ಅಳಿವಿನಿಂದ ಯಾರಿಗೂ ಕೇಡಾಗದು. "ನಾನು ಅಳಿದೆನಾದರೆ, ನಾನು ಈ ಪ್ರಪಂಚದಲ್ಲಿ ಬರಿದಾಗಿಸುವ ಎಡೆಯನ್ನು ನನಗಿಂತ ಯೋಗ್ಯನಾದವನೊಬ್ಬನು ತುಂಬಬಹುದು."

"ನಮ್ಮ ಕೋರಿಕೆಯನ್ನು ಕೇಳಲಾರೆಯಲ್ಲವೇ?" ನೀಲಾಂಬಿಕೆ ಯುವಕನ ಮೊಗದತ್ತ ಕರುಣೆಯ ನೋಟವನ್ನು ಹೊರಳಿಸಿದಳು.

"ಎಂದಾದರೂ ಮಾನವನು ಸಾವನ್ನು ಎದುರುಗೊಳ್ಳಲೇ ಬೇಕು." ಯುವಕನ ತುಟಿಗಳ ಮೇಲೆ ಮಂದಸ್ಮಿತವೊಂದು ಸುಳಿಯಿತು. "ಇಂದು ಅದಕ್ಕೆ ಎದುರಾಗಲು ನಾನು ಹಿಂಜರಿದೆನಾದರೆ,—ಅದು ನನ್ನನ್ನು ಅರಸುತ್ತಾ ನನ್ನ ಬಳಿಗೆ ಬಂದೇ ಬರುವುದು. ನಾನು ಕಲಿಯಂತೆ ಮಲ್ಲಗಾಳಗದಲ್ಲಿ ಅದನ್ನು ಎದುರಿಸುವೆನು. ನಿಮ್ಮ ಚೆಲುಗಣ್ಣುಗಳ ಹೊಳಪು, ನಿಮ್ಮೆದೆಯ ಹರಕೆಗಳು ನನಗೆ ಧೈರ್ಯೋತ್ಸಾಹಗಳನ್ನು ಕೊಡಲಿ; ನನ್ನ ತೋಳುಗಳಿಗೆ ನವಶಕ್ತಿಯನ್ನು ಪ್ರದಾನಮಾಡಲಿ!"

ತರುಣನ ನಿರಾಶಾಪೂರಿತ ವಚನಗಳನ್ನು ಕೇಳಿ ನೀಲಾಂಬಿಕೆಯ ಮೃದು ಹೃದಯ ಕರಗಿತು. ಅವನಿಗೋಸ್ಕರ ಅವಳ ಎದೆಯಿಂದ ಕನಿಕರದ ಬುಗ್ಗೆ ಚಿಮ್ಮಿತು. ಅವಳು "ಈ ನನ್ನ ದುರ್ಬಲ ಶರೀರದಲ್ಲಿರಬಹುದಾದ ಶಕ್ತಿ ಸಹಾನುಭೂತಿಗಳು ನಿನ್ನ ನೆರವಿಗಿರಲೆಂದು ಹಾರೈಸುತ್ತೇನೆ"

"ನಿಮ್ಮ ಸಹಾನುಭೂತಿ ಕೃಪೆಗಳು ನನಗೆ ಗೆಲುವನ್ನು ನೀಡಲಿ!" ಎಂದು ಯುವಕ ಪಡಿನುಡಿದ.

ಅನಿತರಲ್ಲಿ ಆಸ್ಥಾನದ ಜಟ್ಟಿ ಚೆಲುವಯ್ಯ ಕಣಕ್ಕೆ ಇಳಿದು "ನೆಲದಾಯಿಯ ಮಡಿಲಲ್ಲಿ ಚಿರನಿದ್ರೆಯನ್ನು ಹೊಂದಲು ಬಯಸುವ ಆ ಪೋರನೆಲ್ಲಿ?" ಎಂದು ಕೂಗಿದ.

"ಇಗೋ, ನಿನ್ನ ಕರೆಗೆ ಮಾರುಕೊಡಲು ನಾನು ಸಿದ್ಧನಾಗಿಯೇ ಇರುವೆನು!" ಎಂದು ನುಡಿಯುತ್ತಾ ತರುಣ ಕುಸ್ತಿಯ ಕಣಕ್ಕೆ ಇಳಿದ.

---

# ಮೂರು

ಕಾಳಗ ಆರಂಭವಾಯಿತು. ಆ ತರುಣ ಜಟ್ಟಿಗೆ ಅಪಾಯ ಒದಗದಿರಲೆಂದು ಮಾದಲಾಂಬಿಕೆ ಹಾರೈಸಿದಳು. ಆದರೆ ನೀಲಾಂಬಿಕೆ ತನ್ನ ತಂಗಿಗಿಂತಲೂ ಹೆಚ್ಚು ಅವನಿಗೋಸ್ಕರ ಪರಿತಪಿಸಿದಳು. ತನಗೋಸ್ಕರ ಮರುಗುವವರು ಯಾರೂ ಇಲ್ಲವೆಂದೂ, ತಾನು ಮಡಿಯಲು ಬಯಸುವೆನೆಂದೂ, ಆತ ಹೇಳಿದ ಮಾತು ಆಕೆಯ ಹೃದಯದಲ್ಲಿ ಪಡಿದನಿಗೊಂಡಿತು. ಆ ನುಡಿ "ಆತ ನನ್ನಂತೆಯೇ ದುರ್ದೈವಕ್ಕೆ ಈಡಾದವ" ಎಂಬ ಆಲೋಚನೆಗೆ ಪ್ರೇರಣೆಯನ್ನು ನೀಡಿತು. ಅವನ ವಿಚಾರದಲ್ಲಿ ಆಕೆಗೆ ಅಮಿತ ಕರುಣೆ ಹುಟ್ಟಿತು. ಅವನಿಗೆ ಅಪಾಯ ಒದಗಬಹುದೆಂಬ ಸಂದೇಹಕ್ಕೆ ಒಳಗಾದ ಅವಳ ಎದೆ ಭಯೋತ್ಸುಕತೆಗಳ ಕೇಳೀರಂಗವಾಯಿತು. ಆ ಸನ್ನಿವೇಶದಲ್ಲಿಯೇ ಅವಳ ಎದೆ ಆಕೆಗೆ ತಿಳಿಯದಂತೆಯೇ ಪ್ರೇಮಕ್ಕೆ ತುತ್ತಾಯಿತು.

ಸುಂದರಿಯರಾದ ರಾಜಕುಮಾರಿಯರು ಅಪರಿಚಿತ ತರುಣನಿಗೆ ತೋರಿದ ಕರುಣೆ ಸಹಾನುಭೂತಿಗಳು ಬಂಜರು ನೆಲದಲ್ಲಿ ಬಿತ್ತಿದ ಬೀಜಗಳಂತೆ ವಿಫಲವಾಗಲಿಲ್ಲ. ಅವರ ಸ್ನೇಹಪೂರ್ಣ ವಚನಗಳು,—ಅವರ ಕಡೆಗಣ್ಣ ಬೆಳಕು ತರುಣನ ಬಾಹುಗಳಿಗೆ ನವಚೈತನ್ಯವನ್ನು ಪ್ರದಾನಗೈದುವು.

ತರುಣ ಕಣಕ್ಕಿಳಿದು, ಧೈರ್ಯದಿಂದ ಚೆಲುವಯ್ಯನನ್ನು ಇದಿರಿಸಿದ. ಅವನ ಶರೀರ ತೆಳ್ಳಗಿದ್ದುದರಿಂದ ಅವನು ಚೆಲುವಯ್ಯನ ಹಿಡಿತಕ್ಕೆ ಸಿಕ್ಕದೆ, ಸುಲಭದಲ್ಲಿ ಜಾರಿಕೊಳ್ಳುತಿದ್ದ. ಎದುರಾಳಿಗೆ ಪೆಟ್ಟುಗಳನ್ನು ಕೊಟ್ಟು,—ಅವನ ಪ್ರಹಾರಗಳಿಗೆ ಸಿಲುಕದೆ ಹಿಂದೆಸರಿಯುತಿದ್ದ. ಚೆಲುವಯ್ಯ ಹಗೆಯನ್ನು ಹಿಡಿದು ನೆಲಕ್ಕೆ ಅಪ್ಪಳಿಸಬೇಕೆಂದು ತರುಣನನ್ನು ಹಿಂಬಾಲಿಸಿದ. ತರುಣ ಜಟ್ಟಿಯು ಹಿಡಿತಕ್ಕೆ ಸಿಲುಕದೆ ಅವನ ಕಾಲುಗಳ ಮಧ್ಯದಲ್ಲಿ ನುಸುಳಿ,-ಬೆನ್ನಿಗೆ ಗುದ್ದಿ ಹಿಂದೆ ಸರಿದ. ಚೆಲುವಯ್ಯ ಹಗೆಯನ್ನು ಹಿಡಿಯಲೆಂದು ಹಿಂದೆ ತಿರುಗಿದಾಗ, ತರುಣ ಅವನಿಂದ ನಾಲ್ಕಾರು ಮಾರು ದೂರದಲ್ಲಿದ್ದ. ಅವನನ್ನು ಹಿಡಿಯಲೆಂದು ಚೆಲುವಯ್ಯ ತೋಳುಗಳನ್ನೆತ್ತಿ ಓಡಿದ. ತನ್ನನ್ನು ಹಿಡಿಯಲು ಬರುತ್ತಿರುವ ಹಗೆಯನ್ನು ತರುಣ ಕಡೆಗಣ್ಣಿಂದ ನೋಡಿದ. ಅವನು ಒಂದು ಪಕ್ಕಕ್ಕೆ ತಿರುಗಿ ಜಟ್ಟಿಯ ಕಾಲಿಗೆ ತನ್ನ ಕಾಲನ್ನು ಅಡ್ಡ ನೀಡಿದ. ಈ ತಡೆಯಿಂದ ಜಟ್ಟಿಗೆ ತೂಕತಪ್ಪಿತು. ಅವನು ನೆಲದ ಮೇಲೆ

ಉರುಳಿದ. ತರುಣ ಮಂಗನಂತೆ ಜಟ್ಟಿಯ ಬೆನ್ನಮೇಲೆ ನೆಗೆದು ಕುಳಿತು, ಅವನ ಭುಜಗಳನ್ನು ತನ್ನ ಮುಷ್ಟಿಗಳಿಂದ ಗುದ್ದಿದ. ಸ್ಥೂಲಕಾಯನಾದ ಜಟ್ಟಿ ನೆಲದ ಮೇಲಿನಿಂದ ಎದ್ದು, ಬೆನ್ನ ಮೇಲಿರುವ ಹಗೆಯನ್ನು ಕೆಡಹಿ, ಅವನನ್ನು ಹಿಡಿಯಬೇಕೆಂದು ತೋಳು ಚಾಚುವನಿತರಲ್ಲಿ, ತರುಣ ಹಾತೆಯಂತೆ ಹಾರಿ, ನಾಲ್ಕು ಮಾರು ದೂರ ನಿಂತಿದ್ದ.

ಹೀಗೆ ಬಹುಹೊತ್ತು ಕಾಳಗ ನಡೆಯಿತು. ಚೆಲುವಯ್ಯ ಬೆಟ್ಟದಂತಹ ತನ್ನ ಶರೀರವನ್ನು ಹೊತ್ತುಕೊಂಡು ಕಣದಲ್ಲೆಲ್ಲಾ ಓಡಾಡಿದರೂ, ಹಗೆಯ ಮೈ ಮುಟ್ಟಲಾಗಲಿಲ್ಲ; ಒಂದು ಪ್ರಹಾರವನ್ನು ಕೊಡಲಾಗಲಿಲ್ಲ. ಅವನು ಸೋತು ಸುಣ್ಣವಾದ. ಅವನ ಎದೆಯಿಂದ ಬಿಸಿಯುಸಿರುಗಳು ಹೊಮ್ಮ ತೊಡಗಿದುವು. ಮೈ ಬೆವರಿ ಬೆಂಡಾಯಿತು. ತನಗೆ ಸೋಲೊದಗುವುದು ಎಂಬ ಅಂಜಿಕೆಯಿಂದ ಅವನ ಶರೀರ ಕಂಪಿಸತೊಡಗಿತು.

ತರುಣ ದಣಿದಿರಲಿಲ್ಲ. ಚೆಲುವಯ್ಯ ಸೊರಗಿದಂತೆಯೇ ತರುಣನ ಹುರುಪು ಹೆಚ್ಚತೊಡಗಿತು. ಅವನು ಹಗೆಯ ಹಿಂದಿನಿಂದ ಬಂದು ಆಗಾಗ ಪೆಟ್ಟುಗಳನ್ನು ಹಾಕಿ, ಚೆಲುವಯ್ಯನ ಹಿಡಿತಕ್ಕೆ ಸಿಲುಕಿಕೊಳ್ಳದೆ ಪಾರಾಗುತ್ತಿದ್ದ. ಈಗ ಚೆಲುವಯ್ಯನಿಗೆ ಹಗೆಯ ಹೊಡೆತಗಳಿಂದ ತಪ್ಪಿಸಿಕೊಳ್ಳುವುದೇ ದುಸ್ತರವಾಗತೊಡಗಿತು.

"ಸಾಕು, ಸೋಲನ್ನು ಒಪ್ಪಿಕೋ, ನಿನ್ನನ್ನು ಬಿಟ್ಟುಬಿಡುವೆನು; ನೀನು ಸೋತು ಸೊರಗಿರುವೆ." ತರುಣ, ಹಗೆ ಉಬ್ಬಸಬಿಡುವುದನ್ನು ನೋಡಿ ಹೇಳಿದ.

"ಎಲೆ ಪೋರ, ನಿನ್ನ ತುಟಿಗಳ ಮೇಲೆ ಇನ್ನೂ ಮೀಸೆ ಮೊಳೆತಿಲ್ಲ. ನನ್ನನ್ನು ಕೆಡಹುವ ಕೆಚ್ಚು ಬಂದಿತೇ?" ಚೆಲುವಯ್ಯ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಾ ಗರ್ಜಿಸಿದ. "ಒಮ್ಮೆ ನನ್ನ ಹಿಡಿತದಲ್ಲಿ ಸಿಲುಕು, ನಿನ್ನ ಎಲುಬುಗಳನ್ನೆಲ್ಲಾ ಹುಡಿಮಾಡಿಬಿಡುವೆನು."

"ಆದರೆ ನಿನ್ನ ಹಿಡಿತಕ್ಕೆ ನಾನು ಸಿಕ್ಕಬೇಕಲ್ಲ. ಅದು ಕುದುರೆಗೆ ಕೋಡು ಮೊಳೆತಾಗ ಸಾಧ್ಯ!" ಎಂದು ತರುಣ ಜಟ್ಟಿಯನ್ನು ಪರಿಹಾಸಗೈದ.

ಹಗೆಯ ಅಣಕವನ್ನು ಕೇಳಿ ಚೆಲುವಯ್ಯನ ರೋಷ ಇಮ್ಮಡಿಸಿತು. ಅವನು "ಇಂದಿಗೆ ನಿನ್ನ ಆಯುಷ್ಯ ತುಂಬಿತು!" ಎಂದು ಕೂಗುತ್ತಾ ಹಗೆಯ ಮೇಲೆ ನೆಗೆದು ತರುಣನ ಕೈಯನ್ನು ಹಿಡಿಯಲೆಂದು ತೋಳುಚಾಚಿದ.

ಪ್ರೇಕ್ಷಕರು ಎವೆಯಿಕ್ಕದೆ ಉತ್ಸುಕತೆಯಿಂದ ಮಲ್ಲಯುದ್ಧವನ್ನು ನಿರೀಕ್ಷಿಸುತ್ತಿದ್ದರು. ತರುಣ ಚೆಲುವಯ್ಯನ ಹಿಡಿತಕ್ಕೆ ಸಿಕ್ಕಿದ, ಅವನ ಜೀವನಯಾತ್ರೆ ಕೊನೆಗೊಂಡಿತು ಎಂದು ಅವರು ಆಲೋಚಿಸಿದರು; ವೀರ ಯುವಕನಿಗೊದಗಲಿರುವ ಗಂಡಾಂತರವನ್ನು ನೆನೆದು ಮರುಗಿದರು.

ಆದರೆ ಜನರ ಕಾತರತೆ-ಭೀತಿಗಳು ವ್ಯರ್ಥವಾದುವು. ತರುಣ ಚೆಲುವಯ್ಯನ ಹಿಡಿತಕ್ಕೆ ಒಳಗಾಗದೆ,-ನಾಲ್ಕು ಮಾರು ಹಿಂದೆ ನೆಗೆದ. ಮರುಕ್ಷಣದಲ್ಲಿಯೇ ತೋಳನ್ನು ಚಾಚಿ, ಚೆಲುವಯ್ಯನ ಬೆನ್ನಮೇಲೆ ಅಪ್ಪಳಿಸಿದ. ಜಟ್ಟಿ ಈ ಆಘಾತವನ್ನು ತಡೆಯಲಾಗದೆ ನೆಲದ ಮೇಲೆ ಹೊರಳಿದ. ತರುಣನ ಸಾಹಸವನ್ನು ಮೆಚ್ಚಿದ ಜನರು, "ಭಲಾ, ಈಗ ಹಗೆಯನ್ನ ಬಿಡಬೇಡ!" ಎಂದು ಪ್ರಶಂಸೋದ್ಗಾರಗಳನ್ನು ಎತ್ತಿದರು. ತರುಣ ಬಿದ್ದ ಹಗೆಯ ಮೇಲೆ ಏರಿಹೋಗಿ ಆಗಲೇ ಕೊಲ್ಲಬಹುದಿತ್ತು. ಆದರೆ, ನೆಲಕ್ಕೊರಗಿದವನನ್ನು ವಧಿಸಲು ಅವನ ಮನಸ್ಸು ಒಪ್ಪಲಿಲ್ಲ. ಅವನು, "ಹೆದರಬೇಡ, ಬಿದ್ದವನನ್ನು ಇರಿಯಲಾರೆ. ಸಾವಕಾಶವಾಗಿ ಏಳು" ಎಂದು ಚೆಲುವಯ್ಯನಿಗೆ ಹೇಳಿದ

ಚೆಲುವಯ್ಯ ನೆಲವನ್ನು ಬಿಟ್ಟು ಎದ್ದ. ಅವನ ಮೈಕೈಗಳು ನೋಯುತ್ತಿದ್ದುವು. ಈ ರೀತಿ, ಚಟುಲಗತಿಯ ಶಕ್ತಿಸಂಪನ್ನ ಪ್ರತಿಸ್ಪರ್ಧಿಯನ್ನು ಅವನು ಕಾಣದೆ ಬಹು ವರ್ಷಗಳಾಗಿದ್ದುವು. ಮಲ್ಲಯುದ್ಧದ ಕಣದಲ್ಲಿ ಅವನು ಹಿಂದೆಂದೂ ಬಿದ್ದವನಲ್ಲ. ಇಂದು ಅವನು ಬಿದ್ದು ಅಪಮಾನಕ್ಕೆ ಈಡಾಗಿದ್ದ. ಹಿಂದೆ ಅವನನ್ನು ಹೊಗಳುತ್ತಿದ್ದ ಜನರು ಈಗ ಹಗೆಯನ್ನು ಹೊಗಳುತ್ತಿದ್ದರು. ಅವರ ಪ್ರಶಂಸೋದ್ಗಾರಗಳು ಅವನಿಗೆ ಕರ್ಣಕರ್ಕಶವಾದುವು. ಇಂದು ತಾನು ಹಗೆಯ ಬಾಳನ್ನು ಮುಗಿಸಬೇಕು; ಇಲ್ಲವೇ ತಾನು ಮಡಿಯಬೇಕು ಎಂಬ ಭೀಷಣ ಸಂಕಲ್ಪ ಅವನ ಚಿತ್ತದಲ್ಲಿ ಮೂಡಿತು.

ಚೆಲುವಯ್ಯ ನೆಲದಿಂದ ಮೇಲೆದ್ದ. ಒಂದು ನಿಮಿಷ ನಿಂತು ಚೇತರಿಸಿಕೊಂಡ. ಅನಂತರ ಅವನು ತನ್ನ ತೋಳುಗಳನ್ನು ಬೀಸುತ್ತಾ ಸಿಡಿಲಿನಂತೆ ಯುವಕನ ಮೇಲೆರಗಿದ. ಈ ಸಲ ಚೆಲುವಯ್ಯನ ಆಘಾತಕ್ಕೆ ತರುಣ ಸಿಕ್ಕಿದನೆಂದರೆ ಅವನು ಮಡಿಯುವನೆಂದೇ ಪ್ರೇಕ್ಷಕರು ಭಾವಿಸಿದರು. ಅವರು ಮುಂದೇನಾಗುವುದೆಂಬುದನ್ನು ರೆಪ್ಪೆ ಮಿಟುಕಿಸದೆ ನೋಡುತಿದ್ದರು.

ತರುಣ ನಿಂತ ಎಡೆಯನ್ನು ಬಿಟ್ಟು ಕದಲಲಿಲ್ಲ; ಚೆಲುವಯ್ಯನಿಗೆ ಅಳುಕಲಿಲ್ಲ. ಚೆಲುವಯ್ಯ ಹಗೆಯ ಎದೆಯ ಮೇಲೆ ಗುದ್ದಿ ಅವನನ್ನು ಕೆಳಗುರುಳಿಸ

ಬೇಕೆಂದು ಮುಷ್ಟಿಯನ್ನು ಮೇಲೆತ್ತಿದ. ಇನ್ನೇನು, ಆ ಭದ್ರಮುಷ್ಟಿ ವಜ್ರ ಪಾತದಂತೆ ತರುಣನ ಎದೆಯ ಮೇಲೆ ಬೀಳಬೇಕು; ಅನಿತರಲ್ಲಿ ತರಣ ಎಡ ಗೈಯಿಂದ ಚೆಲುವಯ್ಯನ ಎತ್ತಿದ ತೋಳನ್ನು ಹಿಡಿದುಕೊಂಡ. ಮರುಕ್ಷಣ ದಲ್ಲಿ ಅವನ ಬಲಗೈಯು ಜಟ್ಟಿಯ ಕಾಲನ್ನು ಹಿಡಿಯಿತು. ಅವನು ಹೀಗೆ ಚೆಲುವಯ್ಯನ ಕೈಕಾಲುಗಳನ್ನು ಹಿಡಿದು ಮೇಲೆತ್ತಿದ; ಗರಗರನೆ ನಾಲ್ಕು ಸುತ್ತು ತಿರುಗಿಸಿದ; ಅನಂತರ ರಭಸದಿಂದ ಅವನನ್ನು ನೆಲದ ಮೇಲೆ ಒಗೆದ.

ಗುಡ್ಡವೊಂದು ಜರಿದು ಕೆಳಗುರುಳುವಂತೆ ಚೆಲುವಯ್ಯ ದೊಪ್ಪನೆ ನೆಲದ ಮೇಲೆ ಬಿದ್ದ. ಬಿದ್ದವನು ನೆಲವನ್ನು ಬಿಟ್ಟು ಮೇಲೇಳಲಿಲ್ಲ. ಯುವಕ ತಿರುಗಿಸಿ ಒಗೆದ ರಭಸದಿಂದ ಅವನ ಕೈಕಾಲುಗಳು ಮುರಿದುಹೋದುವು. ಅವನ ಪರಿವಾರದವರು ಅವನನ್ನು ಕಣದಿಂದ ಹಿಡಿದೆತ್ತಿ ಬೇರೆಡೆಗೆ ಒಯ್ಯ ಬೇಕಾಯಿತು.

ಗೆಲುವುವೆಣ್ಣು ವಿಜಯಹಾರವನ್ನು ತರುಣನ ಕೊರಳಿಗೆ ತೊಡಿಸಿದಳು. ಜನರು ಯುವಕನ ಧೈರ್ಯ ಸಾಹಸಗಳನ್ನು ಮೆಚ್ಚಿ ಹೊಗಳಿದರು; ಅವರ ಕೊರಳುಗಳಿಂದ ಹೊರಟ ಪ್ರಶಂಸೋದ್ಗಾರಗಳು ಮೇಘಮಂಡಲದಲ್ಲಿ ಮಾರು ಲಿಗೊಂಡುವು.

ಅಪರಿಚಿತ ತರುಣ ಆಸ್ಥಾನ ಜಟ್ಟಿಯನ್ನು ಸೋಲಿಸಿದುದು ವೀರವರ್ಮ ನನ್ನು ಸಂತೋಷಗೊಳಿಸಿತು. ಅವನು ಯುವಕನ ಧೈರ್ಯ, ಸಾಹಸ, ಮಲ್ಲಯುದ್ಧ ಕೌಶಲಗಳನ್ನು ಮೆಚ್ಚಿದ. ಈ ಕಲಿಗೆ ರಾಜಾಶ್ರಯವನ್ನಿತ್ತು ತನ್ನ ಆಶ್ರಿತವರ್ಗಕ್ಕೆ ಸೇರಿಸಿಕೊಳ್ಳಬೇಕೆಂದು ದೊರೆ ಬಯಸಿದ. ಆದುದರಿಂದ ಅವನು ತರುಣನನ್ನು ಕುರಿತು, "ನಿನ್ನ ಕಲಿತನವನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ನಿನ್ನ ಹೆಸರೇನು? ನೀನು ಯಾರ ಮಗನು?" ಎಂದು ಪ್ರಶ್ನಿಸಿದ.

"ಪ್ರಭೂ, ನನ್ನನ್ನು ಅಪ್ಪಾಜಿ ಎಂದು ಕರೆಯುವರು" ವಿನೀತ ಸ್ವರದಲ್ಲಿ ತರುಣ ಉತ್ತರಿಸಿದ. "ಮಾಲೂರು ಜಹಗೀರದಾರ ರಾಚಯ್ಯನ ಕೊನೆಯ ಮಗ."

ಯುವಕನ ನುಡಿಗೇಳಿ ದೊರೆಯ ಹುಬ್ಬುಗಳು ಗಂಟಿಕ್ಕಿದುವು. ಅವನ ಮೊಗದ ಮೇಲೆ ಅಸಂತೋಷದ ಕರಿನೆರಳು ಸುಳಿಯಿತು. ರಾಜನ ಮೊಗದಲ್ಲಿ ಕಳೆಮಾಡುತಿದ್ದ ಮೆಚ್ಚಿಕೆ, ಅತೃಪ್ತಿಯಾಗಿ ರೂಪಾಂತರವನ್ನು ಹೊಂದಿತು.

"ನೀನು ಮಾಲೂರು ರಾಚಯ್ಯನ ಮಗನಾಗಿರದೆ ಬೇರೊಬ್ಬನ ಮಗನಾಗಿದ್ದರೆ, ನಾನು ಹೆಚ್ಚು ಸಂತೋಷ ತಾಳುತಿದ್ದೆ." ದೊರೆ ಅಸಂತೋಷ ಬೆರೆತ ದನಿಯಲ್ಲಿ ಹೇಳಿದ. "ನಿನ್ನ ತಂದೆ ಸಜ್ಜನ, ಗೌರವಶಾಲಿ ಎಂದು ಜನರು ಹೊಗಳುತ್ತಾರೆ. ಆದರೆ ಆತ ನನ್ನ ಅಣ್ಣ, ಹಿಂದಿನ ದೊರೆಯ ಗೆಳೆಯ. ಆದುದರಿಂದ ರಾಚಯ್ಯ ನನ್ನ ಹಗೆಯಾಗಿರುವನು. ನೀನು ರಾಚಯ್ಯನ ವಂಶಕ್ಕೆ ಸೇರದೆ, ಬೇರೊಂದು ಪೀಳಿಗೆಯವನಾಗಿರುತ್ತಿದ್ದು ಈ ಅದಟಿನ ಗೈಮೆಯನ್ನು ಎಸಗಿದ್ದರೆ ನಾನು ಹೆಚ್ಚು ಸುಪ್ರೀತನಾಗುತ್ತಿದ್ದೆ. ಆದರೂ ನೀನು ಕೆಚ್ಚದೆಯ ಕಲಿ. ನಿನಗೆ ಲೇಸಾಗಲಿ!"

ಎಂದು ಹೇಳಿದ ದೊರೆ ಅಪ್ಪಾಜಿಯ ಮಾರ್ನುಡಿಯನ್ನು ಕೇಳಲು ಅಲ್ಲಿ ನಿಲ್ಲದೆ ತನ್ನ ಪರಿವಾರದೊಡನೆ ಎದ್ದು ಹೋದ. ಅಪ್ಪಾಜಿಯ ತಂದೆ ಮಾಲೂರು ರಾಚಯ್ಯ ಸತ್ತು ಹಲವು ವರ್ಷಗಳಾಗಿದ್ದುವು. ಅವನು ಬದುಕಿದ್ದಾಗ ರಾಜ್ಯಭ್ರಷ್ಟ ದೊರೆ ಗುಣವರ್ಮನ ನಿಷ್ಠಾವಂತ ಪ್ರಜೆಯೂ ಮಿತ್ರನೂ ಆಗಿದ್ದ. ಅಪ್ಪಾಜಿ ಪದಚ್ಯುತ ದೊರೆಯ ಮಿತ್ರನ ಪುತ್ರ. ಈ ಕಾರಣದಿಂದ ವೀರವರ್ಮನ ಹೃದಯದಲ್ಲಿ ಉದಿಸಿದ ಸಂತೋಷ ಉಪೇಕ್ಷೆಯಲ್ಲಿ ಕೊನೆಗೊಂಡಿತು. ಆದುದರಿಂದ ಅವನು ಅಪ್ಪಾಜಿಯನ್ನು ಮಾತಾಡಿಸದೆ ಹೊರಟು ಹೋದ.

ಅಪ್ಪಾಜಿ ತನ್ನ ತಂದೆಯ ಗೆಳೆಯನ ಪುತ್ರನೆಂದು ತಿಳಿಯಲು ನೀಲಾಂಬಿಕೆಗೆ ಅಧಿಕ ಸಂತೋಷವಾಯಿತು. ಅವಳು ಮಾದಲಾಂಬಿಕೆಗೆ, "ನನ್ನ ತಂದೆ ರಾಚಯ್ಯನನ್ನು ಆತ್ಮ ಮಿತ್ರನೆಂದು ತಿಳಿದು ಪ್ರೀತಿಸುತ್ತಿದ್ದರು. ಈ ತರುಣ ಮಾಲೂರು ರಾಚಯ್ಯನ ಮಗನೆಂದು ತಿಳಿದಿದ್ದರೆ, ನಾನು ಕಣ್ಣೀರುಗರೆದು ಕಾಳಗಕ್ಕೆ ಹೋಗಬೇಡವೆಂದು ಬೇಡಿಕೊಳ್ಳುತ್ತಿದ್ದೆ" ಎಂದು ಉಸುರಿದಳು.

"ಆತ ಕಾಳಗದಲ್ಲಿ ಸೇರಿ ಗೆದ್ದುದರಿಂದಲೇ ಆತ ಮಾಲೂರು ರಾಚಯ್ಯನ ಮಗನೆಂಬುದನ್ನು ಅರಿಯಲು ನಿನಗೆ ಸಾಧ್ಯವಾದುದು." ನಗುತ್ತಾ ಮಾದಲಾಂಬಿಕೆ ಮಾರ್ನುಡಿದಳು.

"ಚಿಗಪ್ಪ ಉಪೇಕ್ಷೆ ತೋರಿಸಿದುದರಿಂದ ಆತ ಬೇಸರಗೊಂಡ ಹಾಗೆ ತೋರುತ್ತದೆ" ನೀಲಾಂಬಿಕೆ ಹೇಳಿದಳು. "ನಾವು ಅವನನ್ನು ಮಾತಾಡಿಸಿ, ಬೇಸರಕಳೆಯೋಣ. ಅಷ್ಟು ಸೊಗಸಾಗಿ ಕಲಿತನದಿಂದ ಕಾದಿ ಜಗಜಟ್ಟಿ ಚೆಲುವಯ್ಯನನ್ನು ಸೋಲಿಸಿದ ಅವನ ಸಾಹಸಕ್ಕೆ ಮೆಚ್ಚಿಕೆಯನ್ನಾದರೂ ನಾವು ಸೂಚಿಸಬೇಡವೇ?"

ತರುಣಿಯರು ಅಪ್ಪಾಜಿಯಿದ್ದೆಡೆಗೆ ತಮ್ಮ ಅಡಿಗಳನ್ನು ಇರಿಸಿದರು. ತಾನು ಮಾಲೂರು ರಾಚಯ್ಯನ ಮಗನೆಂದು ತಿಳಿದು ದೊರೆ ಆಗ್ರಹ ಗೊಂಡುದರಿಂದ ಅಪ್ಪಾಜಿ ಲಜ್ಜಿತನಾಗಿದ್ದ. ಆ ಲಜ್ಜೆಯಲ್ಲಿ ನಸು ಕೋಪವೂ ಮಿಶ್ರವಾಗಿದ್ದಿತು. ಅವನು ತನ್ನಲ್ಲಿಯೇ, "ನಾನು ಮಾಲೂರು ರಾಚಯ್ಯನ ಕೊನೆಯ ಕೂಸೆಂದು ಹೇಳಿಕೊಳ್ಳಲು ಹೆಮ್ಮೆಪಡುತ್ತೇನೆ. ವೀರವರ್ಮ ರಾಜ ನನ್ನನ್ನು ಗದ್ದುಗೆಗೆ ಹಕ್ಕುದಾರನೆಂದು ಸ್ವೀಕರಿಸುವೆನೆಂದು ಹೇಳಿದರೂ ನಾನು ಮಾಲೂರು ರಾಚಯ್ಯನ ಪುತ್ರನೆಂದು ಹೇಳಿಕೊಳ್ಳದೆ ಇರಲಾರೆ" ಎಂದು ಉದ್ಗಾರವೆತ್ತಿದ.

"ನಿನ್ನ ಸಾಹಸವನ್ನು ನೋಡಿ ನಮಗೆ ಸಂತೋಷವಾಯಿತು" ನೀಲಾಂಬಿಕೆ ಅಪ್ಪಾಜಿಯನ್ನು ಸಮೀಪಿಸಿ ಹೇಳಿದಳು. "ಜಗಜಟ್ಟಿ ಚೆಲುವಯ್ಯನನ್ನು ಗೆದ್ದ ನಿನ್ನ ಯಶಸ್ಸು ನಾಡಿನಲ್ಲೆಲ್ಲಾ ಬೆಳಗಲಿ."

"ನಿಮ್ಮ ಹಾರೈಕೆ ಶುಭಕಾಂಕ್ಷೆಗಳು ಆ ಮಹಾಮಲ್ಲನನ್ನು ಸೋಲಿಸುವ ಶಕ್ತಿಯನ್ನು ತನ್ನ ತೋಳುಗಳಿಗೆ ಕೊಟ್ಟುವು."

"ನನ್ನ ನೆನಪಿಗೋಸ್ಕರ ಈ ಹಾರವನ್ನು ಕೊರಳಲ್ಲಿ ಧರಿಸು. ಅಲ್ಲ, ಇಂದಿನ ಕಾಳಗದಲ್ಲಿ ನೀನು ಪಡೆದ ಗೆಲುವಿನ ನೆನಪಿಗೋಸ್ಕರ ಕೊರಳಲ್ಲಿ ಧರಿಸು." ನೀಲಾಂಬಿಕೆ ಕಂಠದಲ್ಲಿ ವಿರಾಜಿಸುತಿದ್ದ ರತ್ನ ಹಾರವನ್ನು ತೆಗೆ ಯುತ್ತಾ ನುಡಿದಳು. "ಈಗ ದೈವ ನನ್ನ ಮೇಲೆ ಮುನಿದಿದೆ. ನಿನಗೆ ಈ ಅಲ್ಪ ಪಾರಿತೋಷಕವನ್ನು ಕೊಟ್ಟಲ್ಲಿ ಸಾಲದೆಂದು ನನ್ನ ಎದೆ ನುಡಿಯುತ್ತಿದೆ, ಆದರೆ ಅದಕ್ಕಿಂತಲೂ ಹೆಚ್ಚಿನ ಚೈತನ್ಯ ನನಗಿಲ್ಲವೆಂದು ಕೈ ಉಲಿಯುತ್ತಲಿದೆ."

"ನೀವು ತೋರಿದ ದಯೆಗೆ ನಾನು ಋಣಿಯಾಗಿದ್ದೇನೆ." ನೀಲಾಂಬಿಕೆ ನೀಡಿದ ರತ್ನಹಾರವನ್ನು ತೆಗೆದುಕೊಳ್ಳುತ್ತಾ ಅಪ್ಪಾಜಿ ಉಸುರಿದ. "ನಿಮ್ಮ ನೆನಪಿಗೋಸ್ಕರ ಅದನ್ನು ಸದಾಕಾಲ ಕಂಠದಲ್ಲಿ ಧರಿಸಿಕೊಳ್ಳುವೆನು."

"ಇಂದು ನೀನು ಕಲಿಗಳು ಸಹ ಬೆರಳು ಕಚ್ಚುವಂತೆ ಚೆಲುವಯ್ಯ ನೊಡನೆ ಹೋಣರಿದೆ. ನಿನಗಿಂತಲೂ ಶಕ್ತಿಶಾಲಿಯಾದ ಹಗೆಯನ್ನು ಸದೆ ಬಡಿದ ಜೇತಾರ ನೀನು. ದೇವರು ನಿನಗೆ ಮಂಗಳವನ್ನು ಎಸಗಲಿ!"

ಎಂದು ನುಡಿದ ನೀಲಾಂಬಿಕೆ ಮಾದಲೆಯೊಡನೆ ಅಲ್ಲಿಂದ ತೆರಳಿದಳು. ಅಪ್ಪಾಜಿಯೊಬ್ಬನೇ ಅಲ್ಲಿ ಏಕಾಂಗಿಯಾಗಿ ಉಳಿದ. "ನನ್ನ ಎದೆಯಲ್ಲಿ ಅಂಕುರಿಸಿದ ಭಾವಗಳು ನನ್ನ ನಾಲಗೆಯನ್ನು ಬಂಧಿಸಿವೆ. ರಾಜುಕುಮಾರಿ

ಯರು ನನ್ನೊಡನೆ ಮಾತಾಡಲೆಂದೇ ಬಂದರು. ಆದರೆ ನನ್ನ ಬಾಯಿಯಿಂದ ಮಾತು ಹೊರಡದಾಯಿತು. 'ಅಪ್ಪಾಜಿ, ನೀನು ಚೆಲುವಯ್ಯನನ್ನು ಗೆದ್ದುದು ದೊಡ್ಡದಲ್ಲ; ಆದರೆ ಅಬಲೆಯೋರ್ವಳಿಂದ ಪರಾಜಿತನಾದೆ.' ಎಂಬ ಉದ್ಗಾರ ಅವನ ಎದೆಯಿಂದ ಹೊರಟಿತು.

ಮುಂದೇನು ಮಾಡಬೇಕೆಂಬುದನ್ನು ತಿಳಿಯದೆ ಅಪ್ಪಾಜಿ ಸ್ತಂಭೀಭೂತನಾಗಿ ಅಲ್ಲಿಯೇ ನಿಂತ. ಆಗ ಅಲ್ಲಿಗೆ, ರಾಜಸಭಾಸದ ಆಚಣ್ಣ ಎಂಬಾತ ಬಂದು ಅಪ್ಪಾಜಿಯನ್ನು ಸನಿಹಕ್ಕೆ ಕರೆದ.

"ಅಪ್ಪಾಜಿ, ನಾನು ನಿನಗೆ ಒಬ್ಬ ಸ್ನೇಹಿತನಂತೆ ಒಂದು ಸಲಹೆಯನ್ನು ಕೊಡುತ್ತೇನೆ." ಆಚಣ್ಣ ಹೇಳಿದ. "ನೀನು ಈಗಲೇ ಇಲ್ಲಿಂದ ಹೋಗುವುದು ಒಳ್ಳೆಯದು. ಇಲ್ಲದಿದ್ದರೆ ನಿನಗೆ ಅಪಾಯ ಒದಗಬಹುದು. ನೀನು ರಾಜನ ಪ್ರಶಂಸೆ ಮತ್ತು ಪ್ರೇಮಗಳಿಗೆ ಅರ್ಹನು. ಆದರೆ ನೀನು ಮಾಲೂರು ರಾಚಯ್ಯನ ಮಗನೆಂಬುದು ರಾಜನನ್ನು ಅಸಂತೃಪ್ತಿ ಮತ್ತು ಕೋಪಗಳಿಗೆ ಈಡು ಮಾಡಿಗೆ. ನೀನು ಬೇಗನೆ ಇಲ್ಲಿಂದ ಕಾಲ್ತೆಗೆಯುವುದು ಒಳ್ಳೆಯದು."

"ತುಂಬ ಉಪಕಾರವಾಯಿತು." ಅಪ್ಪಾಜಿಯ ಕೊರಳಿಂದ ಪಡಿನುಡಿ ಹೊರಟಿತು. "ಆದರೆ ನೀವು ಒಂದು ಸಂಗತಿಯನ್ನು ತಿಳಿಸಬೇಕು. ಇಂದು ಮಲ್ಲಯುದ್ಧವನ್ನು ನೋಡಲು ಬಂದ ತರುಣಿಯರಲ್ಲಿ ದೊರೆಮಗಳು ಯಾರು?"

"ಗುಣ ಶೀಲಗಳ ಆಧಾರದ ಮೇಲೆ ಹೇಳುವುದಾದರೆ,— ನೀನು ನೋಡಿದ ಈರ್ವರು ತರುಣಿಯರೂ ದೊರೆಮಗಳಂದಿರಲ್ಲ. ಆದರೆ ಜನನದಿಂದ ಕಿರಿಯಳೇ ದೊರೆ ಮಗಳು." ಆಚಣ್ಣ ಅಪ್ಪಾಜಿಗೆ ರಾಜಕುಮಾರಿ ಯಾರೆಂಬುದನ್ನು ಅರುಹಿದ. "ಹಿರಿಯಳು ಪದಚ್ಯುತ ರಾಜನ ಮಗಳು. ರಾಜ್ಯಾಪಹಾರಿಯಾದ ನಮ್ಮ ದೊರೆ ತನ್ನ ಮಗಳಿಗೆ ಒಡನಾಡಿಯಾಗಿರಲೆಂದು ಗುಣವರ್ಮ ದೊರೆಯ ಮಗಳು ನೀಲಾಂಬಿಕೆಯನ್ನು ಅರಮನೆಯಲ್ಲಿಯೇ ಇರಿಸಿಕೊಂಡಿರುವನು. ಆದರೆ ಇತ್ತೀಚೆ ದೊರೆಯ ಕೋಪ ದೃಷ್ಟಿ ನೀಲಾಂಬಿಕೆಯ ಮೇಲೂ ಬೀಳತೊಡಗಿದೆ."

ಆಚಣ್ಣನ ಸಲಹೆಯಂತೆ ಅಪ್ಪಾಜಿ ರಾಜಾಸ್ಥಾನದಿಂದ ಹೊರಟ. ಆದರೆ ಅವನ ಮನಸ್ಸು ನೀಲಾಂಬಿಕೆಯನ್ನೇ ಆಲೋಚಿಸುತಿದ್ದಿತು. ಅವನ ಕಣ್ಣುಗಳು ಅವಳ ಸುಂದರಾಕಾರವನ್ನೇ ನೋಡುತಿದ್ದುವು. ಹೃದಯ ವಿಲಕ್ಷಣ ನಾಟ್ಯರಂಗವಾಗಿದ್ದಿತು.

---

## ನಾಲ್ಕು

ದೊರೆಯ ಓಲಗದಲ್ಲಿ ಮಲ್ಲಯುದ್ಧ ಕಳೆದು ದಿನವೊಂದು ಸಾಗಿತು. ಆದರೆ ನೀಲಾಂಬಿಕೆಯ ಚಿತ್ತದಲ್ಲಿ ತಾನು ನೋಡಿದ ಮಲ್ಲಯುದ್ಧದ ಚಿತ್ರಗಳೇ ಕುಣಿದಾಡುತ್ತಿದ್ದುವು. ಅವಳ ಕಣ್ಣುಮುಂದೆ ಅಪ್ಪಾಜಿಯ ಸುಂದರಾಕಾರವೇ ಸುಳಿದಾಡುತ್ತಿದ್ದಿತು. ಅವಳು ಅಪ್ಪಾಜಿಯನ್ನು, ಅವನ ತಂದೆ ರಾಚಯ್ಯನನ್ನು ಧ್ಯಾನಿಸುತ್ತಿದ್ದಳು. ಅಂದು ಅವಳು ಎಂದಿನಂತೆ ಮಾದಲಾಂಬಿಕೆಯೊಡನೆ ಮಾತಾಡದಾದಳು.

"ಏನಕ್ಕ,—ಈ ದಿನ ಮೌನವೇ ಆಕಾರವನ್ನು ತಾಳಿ ನಿಂತಂತೆ ಇರುವೆಯಲ್ಲ?" ನಗುತ್ತಾ ಮಾದಲೆ ಅಕ್ಕನನ್ನು ಪ್ರಶ್ನಿಸಿದಳು. "ನಿನ್ನ ತುಟಿಗಳಿಂದ ಒಂದೇ ಒಂದು ನುಡಿ ಹೊರಡುತ್ತಲಿಲ್ಲ!"

"ನಾಯಿಗೆ ಎಸೆಯಲು ಸಹ ಒಂದು ಮಾತು ನನ್ನಿಂದ ದೊರಕದು."

"ಕುನ್ನಿಗೆಸೆಯಲು ಮಾತು ನಿಸ್ಸಾರ ವಸ್ತುವಲ್ಲ. ಅದು ಅಮೂಲ್ಯವಾದುದು. ನನ್ನ ಮೇಲೆ ನಿನ್ನ ನುಡಿಯಂಬುಗಳನ್ನು ಎಸೆ. ನನ್ನ ಬುದ್ಧಿಯನ್ನು ಕುಂಠಿತಗೊಳಿಸು— ಅದೇನು ಆಲೋಚಿಸುತ್ತಿರುವೆ? ಅರಣ್ಯವಾಸಿಯಾದ ದೊಡ್ಡಪ್ಪನ ಚಿಂತೆಹಿಡಿಯಿತೇ?

"ಅಲ್ಲ,—ಇಂದು ನನ್ನ ಆಲೋಚನೆ ಹೊಸ ಹಾದಿಯನ್ನು ಹಿಡಿದಿದೆ, ಮಾದಲೆ."

"ಅಕ್ಕ, ಜೋಕೆ!" ಮಾದಲೆಯ ತುಟಿಗಳ ಮೇಲೆ ಮಂದಸ್ಮಿತದ ಕಿರಣವೊಂದು ಕಳೆಯಾಡಿತು. "ಜನಸಂಚಾರವಿಲ್ಲದ ಕಾಡುಹಾದಿಯನ್ನು ಹಿಡಿದರೆ, ಸೀರೆ ಸೆರಗಿಗೆ ಮುಳ್ಳುಗಳು ಅಂಟಿಕೊಳ್ಳುವುವು."

"ಸೆರಗಿಗೆ ಅಂಟಿದ ಮುಳ್ಳುಗಳನ್ನು ಕಿತ್ತೊಗೆದು ಮುಂದೆ ಸಾಗಿದರಾಯಿತು."

"ನಿನ್ನ ಮನಸ್ಸು ಓಡುತ್ತಿರುವ ಆ ಹೊಸ ಹಾದಿ ಯಾವುದು?"

"ನೋಡು, ನಿನ್ನೆ ದಿನ ಅಪ್ಪಾಜಿ ಚೆಲುವಯ್ಯನನ್ನು ಹೇಗೆ ಎಷ್ಟು ಸುಲಭವಾಗಿ ಹೊಡೆದು ಕೆಡಹಿದ! ಅವನು ಆ ಜಗಜಟ್ಟಿಯನ್ನು ಅಷ್ಟು ಸುಲಭದಲ್ಲಿ ಸದೆಯಬಲ್ಲನೆಂದು ಯಾರಾದರೂ ಊಹಿಸಿದ್ದರೆ? ಎಂತಹ ಚಾತುರ್ಯ! ಎಂತಹ ಕೆಚ್ಚೆದೆ!"

"ಅಕ್ಕ, ನನಗೆ ಅಚ್ಚರಿಯಾಗುತ್ತಿದೆ?" ವಿಸ್ಮಯ ಬೆರೆತ ಕಣ್ಣುಗಳಿಂದ ಮಾದಲಾಂಬಿಕೆ ಅಕ್ಕನ ಮೋರೆ ನೋಡಿದಳು.

"ಏಕೆ ತಂಗಿ?"

"ನೀನು ಅಪ್ಪಾಜಿಯನ್ನು ನೋಡಿದುದು ನಿನ್ನೆ. ಅವನ ಸಂಗಡ ನಾಲ್ಕು ಮಾತುಗಳನ್ನು ಸಹ ಸರಿಯಾಗಿ ಆಡಿಲ್ಲ. ಆದರೂ ನೀನು ಅವನನ್ನು ಪ್ರೀತಿಸ ಹೊರಟಿರುವೆಯಲ್ಲ. ಈ ಬಗೆಯ ಸಂಗತಿ ಕತೆಗಳಲ್ಲಿ ಮಾತ್ರವಲ್ಲದೆ, ಯಥಾರ್ಥ ಜೀವನದಲ್ಲಿ ಸಾಧ್ಯವೇ? ಎಂದು ನನಗೆ ಆಶ್ಚರ್ಯವಾಗುತ್ತಿದೆ."

"ನೀನು ಬೆರಗಾಗಬೇಕಾಗಿಲ್ಲ ಮಾದಲೆ. ಅಪ್ಪಾಜಿ ಮಾಲೂರು ರಾಚಯ್ಯನ ಪುತ್ರ" ನೀಲಾಂಬಿಕೆ ನುಡಿದಳು. "ಮಾಲೂರು ರಾಚಯ್ಯ ನನ್ನ ತಂದೆಯ ಆಪ್ತಮಿತ್ರ. ಆದುದರಿಂದ ನನ್ನ ಮನಸ್ಸು ಅಪ್ಪಾಜಿಯನ್ನು ಸ್ಮರಿಸುವುದು."

"ನನ್ನ ತಂದೆಗೆ ಮಾಲೂರು ರಾಚಯ್ಯ ಹಗೆ." ಮಾದಲೆಯ ತುಟಿಗಳ ಮೇಲೆ ತುಂಟತನದ ನಗೆಯೊಂದು ಸುಳಿದಾಡಿತು. "ನಿನ್ನ ಸಿದ್ಧಾಂತದಂತೆ ರಾಚಯ್ಯನ ಪುತ್ರ ಅಪ್ಪಾಜಿಯನ್ನು ನಾನು ದ್ವೇಷಿಸಬೇಕು. ಆದರೆ ನನ್ನ ಎದೆಯಲ್ಲಿ ದ್ವೇಷಮಾತ್ಸರ್ಯಗಳು ಅಪ್ಪಾಜಿಯ ವಿಷಯದಲ್ಲಿ ಹುಟ್ಟುತಲಿಲ್ಲವಲ್ಲ?"

ಹೀಗೆ ನೀಲಾಂಬಿಕೆಯ ಮಾತು ಅಪ್ಪಾಜಿಯನ್ನು ಬಳಸುತ್ತಿದ್ದಿತು. ಅವಳು ಆಗಾಗ ಅವನ ಗುಣಗಾನ ಮಾಡುತ್ತಿದ್ದಳು; ಅವನ ಶಕ್ತಿಸಾಹಸ ಕದನ ಕುಶಲತೆಗಳನ್ನು ಬಣ್ಣಿಸುತ್ತಿದ್ದಳು; ಅವಳ ಈ ವರ್ತನೆಗಳನ್ನು ಕಂಡು ಮಾದಲಾಂಬಿಕೆ ಅಕ್ಕ ಅಪ್ಪಾಜಿಯನ್ನು ಪ್ರೀತಿಸತೊಡಗಿರುವಳೆಂದು ಅರಿತುಕೊಂಡಳು. ಅಲ್ಪವೇಳೆಯ ದರ್ಶನ ಪರಿಚಯಗಳಿಂದ ನೀಲಾಂಬಿಕೆಯ ಹೃದಯದಲ್ಲಿ ಒಲವು ಮೊಳೆತುದನ್ನು ಕಂಡು ಮಾದಲಾಂಬಿಕೆಗೆ ಸೋಜಿಗವೆನಿಸಿತು.

ಅಪ್ಪಾಜಿಯ ಮುಖದರ್ಶನ ವೀರವರ್ಮನಿಗೆ ಪದಚ್ಯುತ ಅರಸನ ನಿಷ್ಠಾವಂತರೂ ಮಿತ್ರರೂ ಆದ ಪ್ರಜೆಗಳು ನಾಡಿನ ಶ್ರೀಮಂತ ಮತ್ತು ಕುಲೀನ ವರ್ಗಗಳಲ್ಲಿರುವರೆಂಬ ಸ್ಮರಣೆಯನ್ನು ಒದಗಿಸಿತು. ರಾಜ್ಯಭ್ರಷ್ಟ ದೊರೆಯ ಆಪ್ತವರ್ಗಕ್ಕೆ ಸೇರಿದವರು ನಾಡಿನಲ್ಲಿರುವುದು ವೀರವರ್ಮನ ಎದೆಯನ್ನು ಶಲ್ಯದಂತೆ ಭೇದಿಸಿತು. ಆದುದರಿಂದಲೇ ಅವನು ಅಕಾರಣವಾಗಿ ಅಪ್ಪಾಜಿಯ ವಿಷಯದಲ್ಲಿ ಅಸಂತೃಪ್ತಿಯನ್ನು ತಾಳಿದ.

ವೀರವರ್ಮ ರಾಜ ಶಾಸನಚಕ್ರವನ್ನು ಸ್ವಾಧೀನಪಡಿಸಿಕೊಂಡು ಕೆಲವು ವರ್ಷಗಳು ಉರುಳಿದರೂ ನಾಡಿನ ಪ್ರಜಾಕೋಟಿ ಹಿಂದಿನ ದೊರೆಯನ್ನು ಮರೆಯಲಿಲ್ಲ. ಅವರು ಆತನ ಉತ್ತಮ ಗುಣಗಳನ್ನು ಹಾಡಿ ಹೊಗಳುತ್ತಿದ್ದರು. ಅಲ್ಲದೆ ನೀಲಾಂಬಿಕೆಯ ಸೌಜನ್ಯ, ವಿನಯ, ವಿದ್ಯಾಬುದ್ಧಿಗಳನ್ನು ಎತ್ತಿಹೇಳಿ ಗುಣಗಾನ ಮಾಡುತ್ತಿದ್ದರು; ಅವಳ ವಿಷಯದಲ್ಲಿ ಮರುಕ ಸಹಾನುಭೂತಿಗಳನ್ನು ಸೂಚಿಸುತ್ತಿದ್ದರು. ಈ ಸ್ತುತಿ ಗುಣಗಾನಗಳ ಸುದ್ದಿಗಳು ಗೂಢಚಾರರ ಮೂಲಕ ದೊರೆಯ ಕಿವಿಗಳಿಗೆ ಬೀಳುತ್ತಿದ್ದುವು. ಪದಚ್ಯುತ ರಾಜನ ಮತ್ತು ಆತನ ಪುತ್ರಿಯ ಸ್ತುತಿಪ್ರಶಂಸೆಗಳು ತನ್ನ ತೆಗಳಿಕೆ ನಿಂದೆಗಳಾಗಿವೆಯೆಂದು ದೊರೆ ಭಾವಿಸತೊಡಗಿದ. ಅವನ ಅಂತರಂಗದಲ್ಲಿ ಹೊಗೆಯಾಡುತ್ತಿದ್ದ ಮಾತ್ಸರ್ಯ ಜ್ವಾಲಾಮುಖಿ ಆಸ್ಫೋಟನಗೊಳ್ಳಲು ಹವಣಿಸತೊಡಗಿತು. ನೀಲಾಂಬಿಕೆಯನ್ನು ನಾಡಿನಿಂದ ಓಡಿಸದೆ ಪ್ರಜೆಗಳು ಹಿಂದಿನ ದೊರೆಯನ್ನು ಮರೆಯರು ಎಂದು ಅವನು ಊಹಿಸಿದ. ಹಾಗೆಯೇ ನೀಲಾಂಬಿಕೆಯನ್ನು ಅರಮನೆಯಿಂದ ಹೊರತಳ್ಳಲು ಅವನು ನಿರ್ಧಾರಮಾಡಿದ.

ನೀಲಾಂಬಿಕೆ ಮಾದಲಾಂಬಿಕೆಯರು ಕೋಣೆಯಲ್ಲಿ ಅಪ್ಪಾಜಿಯ ವಿಷಯ ಪ್ರಸ್ತಾವಿಸುತ್ತಾ ಕುಳಿತಿದ್ದಾಗ, ದೊರೆ ಆ ಕೋಣೆಯೊಳಗೆ ನುಗ್ಗಿದ. ಅವನ ದೃಷ್ಟಿ ನೀಲಾಂಬಿಕೆಯ ಮೊಗದತ್ತ ಹೊರಳಿತು.

"ನೀಲಾ, ನೀನು ಒಡನೆ ಅರಮನೆಯನ್ನು ತೊರೆದು ಹೋಗತಕ್ಕದ್ದು." ಎಂದು ವೀರವರ್ಮನ ಕೊರಳಿಂದ ರಾಜಾಜ್ಞೆ ಹೊರಟಿತು.

"ನಾನೇ ಚಿಗಪ್ಪ!" ನೀಲಾಂಬಿಕೆಯ ಕಣ್ಣುಗಳಿಂದ ವಿಸ್ಮಯದ ಕಿಡಿಗಳು ಹೊರಚೆಲ್ಲಿದುವು.

"ಹೌದು ನೀನೇ! ಇದು ನನ್ನಾಜ್ಞೆ." ದೊರೆಯ ಕೊರಳಿಂದ ಕರ್ಕಶವಾಣಿ ಹೊಮ್ಮಿತು. "ಇನ್ನು ಹತ್ತುದಿನಗಳಾಚೆ ನೀನು ರಾಜಾಸ್ಥಾನದಿಂದ ಆರು ಹರದಾರಿಗಳ ಈಚೆ ಕಂಡುಬಂದುದೇ ಆದರೆ ನಿನ್ನನ್ನು ಶೂಲಕ್ಕೇರಿಸಲಾಗುವುದು."

"ಆದರೆ ಚಿಗಪ್ಪ! ನಾನು ಗೈದ ಯಾವ ಅಪರಾಧಕ್ಕೆ ಈ ಕ್ರೂರ ದಂಡನೆಯನ್ನು ವಿಧಿಸುವಿರಿ?" ನೀಲಾಂಬಿಕೆ ದೊರೆಯನ್ನು ಪ್ರಶ್ನಿಸಿದಳು. "ನಾನು ತ್ರಿಕರಣಗಳಲ್ಲಿ ನಿಮಗೆ ನೋವಾಗುವಂತಹ ಯಾವ ಕಾರ್ಯವನ್ನೂ ಆಚರಿಸಿಲ್ಲ."

"ಎಲ್ಲ ದ್ರೋಹಿಗಳೂ ನಿನ್ನಂತೆಯೇ ಹೇಳುವರು. ಅವರೆಲ್ಲರೂ ತಾವು ಸತ್ಯದ ಮೂರ್ತಿಮಂತ ಸ್ವರೂಪರೆಂದು ನಟನೆ ಮಾಡುತ್ತಾರೆ. ಆದರೆ ಹೃದಯ ಮಾತ್ರ ಹಾಲಾಹಲದ ಕೊಡವಾಗಿರುತ್ತದೆ. ನಿನ್ನಲ್ಲಿ ನಾನು ಎಂದೂ ವಿಶ್ವಾಸ ವಿರಿಸಲಾರೆ."

"ನನ್ನಲ್ಲಿ ನಿಮಗಿರುವ ಅಪನಂಬಿಕೆಯೇ ನನ್ನನ್ನು ದ್ರೋಹಿಯೆಂದು ಭಾವಿಸಲು ಕಾರಣವಾಗಿದೆ. ನಾನು ತಮಗೆ ಕೇಡು ಬಗೆದಿರುವೆನೆಂಬುದಕ್ಕೆ ಆಧಾರವೇನು?"

"ನೀನು ನಿನ್ನ ಅಪ್ಪನ ಮಗಳು! ಅದೊಂದೇ ಆಧಾರ ನನಗೆ ಸಾಕು."

"ನೀವು ನನ್ನ ತಂದೆಯ ರಾಜ್ಯವನ್ನು ಕಸಿದುಕೊಂಡಾಗಲೂ ನಾನು ನನ್ನ ತಂದೆಯ ಮಗಳಾಗಿಯೇ ಇದ್ದೆ." ನೀಲಾಂಬಿಕೆ ಮಾರ್ನುಡಿದಳು. "ಆಗ ನಾನು ರಾಜದ್ರೋಹಿಯಾಗಿರಲಿಲ್ಲ. ದ್ರೋಹ ಚಿಂತನೆಯ ಬುದ್ಧಿ ಆನುವಂಶಿಕವಾಗಿ ಬರುವುದಿಲ್ಲ. ನನ್ನ ದಾರಿದ್ರ್ಯ ದ್ರೋಹಕಾರಕವೆಂದು ನೀವು ತಪ್ಪು ತಿಳಿಯಬಾರದೆಂದು ನನ್ನ ಬಿನ್ನಹ."

"ಅಪ್ಪಾ, ಅಪ್ಪಾ, ಅಕ್ಕನಿಗೋಸ್ಕರ ನನ್ನ ಪ್ರಾರ್ಥನೆಯನ್ನು ಕೇಳಿ." ಈ ತನಕ ನೀರವತೆಯನ್ನು ಕೈಗೊಂಡಿದ್ದ ಮಾದಲಾಂಬಿಕೆ ಈಗ ನಡುವೆ ಬಾಯಿ ಹಾಕಿದಳು. "ನೀವು ಅಕ್ಕನನ್ನು ಅರಮನೆಯಿಂದ ಹೊರದೂಡ ಬೇಡಿ."

"ನೀನು ಈ ಮಾತುಗಳನ್ನಾಡುವುದು! ಮಾದಲೆ." ವೀರವರ್ಮ ಮಗಳು ನೀಲಾಂಬಿಕೆಗೋಸ್ಕರ ಪ್ರಾರ್ಥಿಸುವುದನ್ನು ಕಂಡು ವಿಸ್ಮಯೋದ್ಗಾರ ಕ್ತ್ತಿದ. ಈಸುದಿನ ನಿನಗೋಸ್ಕರ ಅವಳಿಗೆ ಅರಮನೆಯಲ್ಲಿ ಆಸರೆಗೊಟ್ಟೆ. ಇಲ್ಲದಿದ್ದರೆ ಅವಳನ್ನು ಅವಳ ಅಪ್ಪನ ಬೆನ್ನಹಿಂದೆಯೇ ಕಾಡಿಗಟ್ಟುತಿದ್ದೆ."

"ಅಪ್ಪಾ, ನಾನು ಅಂದು ಬುದ್ಧಿ ಬಲಿಯದ ಸಣ್ಣ ಹಸುಳೆಯಾಗಿದ್ದೆ. ಆಗ ನಾನು ಅಕ್ಕನ ಯೋಗ್ಯತೆ, ಆಕೆಯ ಉದಾತ್ತ ಗುಣಗಳ ಬೆಲೆ, ಇವುಗಳನ್ನು ಅರಿತಿರಲಿಲ್ಲ. ಆದುದರಿಂದ ಅವಳನ್ನು ಅರಮನೆಯಿಂದ ಅಟ್ಟ ಬಾರದೆಂದು ಅಂದು ನಾನು ನಿಮ್ಮಲ್ಲಿ ಬಿನ್ನವಿಸಿಕೊಳ್ಳಲಿಲ್ಲ." ಮಾದಲಾಂಬಿಕೆ ತಂದೆಯ ಪಾದಗಳನ್ನು ಹಿಡಿದು ಬೇಡಿಕೊಂಡಳು. "ಈಗ ನಾನು ಅಕ್ಕನ ಯೋಗ್ಯತೆಯನ್ನು, ಆಕೆಯ ಶ್ರೇಷ್ಠ ಗುಣಗಳನ್ನು ಸಂಪೂರ್ಣವಾಗಿ ಬಲ್ಲೆನು. ಅವಳಿಂದು ರಾಜದ್ರೋಹಿಯಾದರೆ ನಾನೂ ಒಬ್ಬ ರಾಜದ್ರೋಹಿಯೇ ಸರಿ!

ಏಕೆಂದರೆ ನಾವು ಈ ತನಕ ಒಟ್ಟಿಗೆ ಒಂದೇ ಹಾಸಿಗೆಯಲ್ಲಿ ಮಲಗುತಿದ್ದೆವು; ಆಡುತ್ತಿದ್ದೆವು; ಒಟ್ಟಿಗೆ ಐಗಳಿಂದ ಓದುಕಲಿತೆವು. ನಾವೆಲ್ಲಿ ತೆರಳಿದರೂ ಪರಸ್ಪರ ಅಗಲದೆ ಇರುತಿದ್ದೆವು.

"ಮಗೂ, ನಿನ್ನ ಬುದ್ಧಿ ಬಹು ಸರಳವಾದುದು. ಅವಳು ಬಹು ಮಾರ್ಮಿಕಳು. ಅವಳ ರಹಸ್ಯವನ್ನು ನೀನು ಅರಿಯೆ. ಅವಳ ಮೌನ, ಅವಳ ತಾಳ್ಮೆ-ಅವಳ ವಿನಯ-ಇವು ಆಕೆಯ ತಂದೆಯ ಗುಣಗಳನ್ನು ಪ್ರಜೆಗಳಿಗೆ ಸಾರಿಹೇಳುತ್ತಿವೆ. ಜನರು ಅವಳ ಬಗ್ಗೆ ಕನಿಕರ ತಾಳುತ್ತಾರೆ; ಅವಳ ಗುಣಗಳನ್ನು ಹಾಡಿ ಹೊಗಳುತ್ತಾರೆ. ನೀನೊಬ್ಬಳು ಮೂರ್ಖಳೇ ಸರಿ. ನಿನ್ನ ಹೆಸರು, ನಿನ್ನ ಯಶಸ್ಸುಗಳನ್ನು ಅವಳು ಕದಿಯುತಿದ್ದಾಳೆ. ಅವಳು ಇಲ್ಲವಾದರೆ ಜನರು ನಿನ್ನ ಗುಣವಿಶೇಷಗಳನ್ನು ಕಾಣುವರು. ನೇಸರಿಲ್ಲದಾಗ ಚಂದ್ರನ ಬೆಳಕು ಜನರ ಕಣ್ಮನಗಳನ್ನು ಸೆಳೆಯುವಂತೆ,-ಅವಳಿಲ್ಲದಾಗ ನೀನು ಬೆಳಗುವೆ. ನನ್ನ ಆಜ್ಞೆಗೆ ಪ್ರತಿಯಾಗಿ ನೀನು ತುಟಿ ಬಿಚ್ಚದಿರು. ನನ್ನ ಆಜ್ಞೆ ಸ್ಥಿರವಾದುದು. ಅದನ್ನೆಂದೂ ನಾನು ಮಾರ್ಪಡಿಸೆನು. ಅವಳನ್ನು ನಾಡಿನಿಂದ ಗಡಿಪಾರು ಮಾಡಿದ್ದೇನೆ."

"ಅಪ್ಪಾ, ಹಾಗಾದರೆ ರಾಜ್ಯತ್ಯಾಗ ಮಾಡೆಂದು ನೀವು ನನಗೂ ಆಜ್ಞಾಪಿಸಿರಿ." ಮಾದಲಾಂಬಿಕೆ ಕಣ್ಣೀರುಗರೆಯುತ್ತಾ ತಂದೆಗೆ ಹೇಳಿದಳು. "ಏಕೆಂದರೆ ಅಕ್ಕನಿಲ್ಲದೆ ನಾನೊಬ್ಬಳೇ ಏಕಾಂಗಿಯಾಗಿ ಈ ಅರಮನೆಯಲ್ಲಿ ಜೀವಿಸಲಾರೆ".

"ನೀನೊಬ್ಬಳು ತಿಳಿಗೇಡಿ!" ಎಂದು ದೊರೆ ಮಾದಲಾಂಬಿಕೆಯನ್ನು ಗದರಿಸಿದ.

ಮಗಳ ನೇತ್ರಗಳಿಂದ ಹರಿಯುತ್ತಿರುವ ಬಾಷ್ಪಸ್ರೋತ ದೊರೆಯ ಕ್ರೂರ ನಿರ್ಧಾರವನ್ನು ಬದಲಿಸಲು ಶಕ್ತಿಯುಳ್ಳದ್ದಾಗಲಿಲ್ಲ.

"ನೀಲಾ," ಗುಣವರ್ಮನ ದೃಷ್ಟಿ ನೀಲಾಂಬಿಕೆಯ ಮೊಗದತ್ತ ಹೊರಳಿತು. "ನನ್ನ ನಾಡಿನ ಗಡಿಯೊಳಗೆ ನೀನು ಹತ್ತು ದಿನಗಳಾಚೆ ಕಂಡು ಬಂದುದೇ ಆದರೆ, ನೀನು ನಿನ್ನ ತಲೆಯನ್ನು ದಂಡತೆರಬೇಕಾಗುವುದು! ಇದು ರಾಜಾಜ್ಞೆ."

ಎಂದು ಕರ್ಕಶ ಸ್ವರದಲ್ಲಿ ಹೇಳಿ ವೀರವರ್ಮ ದೊರೆ ಆ ಕೋಣೆಯಿಂದ ಹೊರತೆರಳಿದ.

"ಅಕ್ಕ, ನೀನು ಅರಮನೆಯನ್ನು ತೊರೆದು ಎಲ್ಲಿಗೆ ಹೋಗುವೆ?"

ಮಾದಲಾಂಬಿಕೆ ನೀಲಾಂಬಿಕೆಯ ಹೆಗಲ ಮೇಲೆ ತೋಳನ್ನಿರಿಸಿ ಸಾಂತ್ವನಸ್ವರದಲ್ಲಿ ಹೇಳಿದಳು. "ಏನು ನಾವು ತಂದೆಯುಂದಿರನ್ನು ಪರಸ್ಪರ ಬದಲಿಸಿಕೊಳ್ಳೋಣವೇ? ನಾನು ಸಂತೋಷದಿಂದ ನನ್ನ ಅಪ್ಪನನ್ನು ಬಿಟ್ಟುಕೊಡುವೆನು— ನೋಡು, ನೀನು ಮರುಗಕೂಡದು. ಎಲ್ಲಿ, ನಗು!"

ಕಾರ್ಮುಗಿಲು ಕವಿದ ಬಾನಿನಲ್ಲಿ, ಸಿಡಿಲು ಮೊಳಗಿದಾಗ ಮಿಂಚು ಕ್ಷಣಕಾಲ ತೋರಿ ಮಾಯವಾಗುವಂತೆ, ಚಿಂತಾಭರಿತವಾದ ನೀಲಾಂಬಿಕೆಯ ಮೊಗದಲ್ಲಿ ಮಂದಹಾಸವೊಂದು ಸುಳಿದು ನರ್ತಿಸಿ ಮಾಯವಾಯಿತು. ಅವಳು ಗಂಭೀರ ಸ್ವರದಲ್ಲಿ, "ತಂಗಿ, ಚೇಷ್ಟೆ ಸಾಕು. ನನಗೆ ಮರುಗಲು ಕಾರಣವಿದೆ." ಎಂದು ನುಡಿದಳು.

"ಇಂದು ಮರುಗಲು ಕಾರಣವಿಲ್ಲ ಅಕ್ಕ. ನಿನಗಿಂತಲೂ ಹೆಚ್ಚು ಮರುಗಿ ಕಣ್ಣೀರು ಕೋಡಿಯನ್ನು ಹರಿಸಬೇಕಾದವಳು ನಾನು." ನಿರ್ಧಾರಪೂರ್ಣ ಸ್ವರದಲ್ಲಿ ಮಾದಲಾಂಬಿಕೆ ಮಾರ್ನುಡಿದಳು. "ನಾಡನ್ನು ಆಳುವ ದೊರೆ ಮಗಳಾದ ನನ್ನನ್ನೇ ರಾಜ್ಯತ್ಯಾಗ ಮಾಡಬೇಕೆಂದು ಆಜ್ಞೆಗೈದಿರುವನು!"

"ಇಲ್ಲ, ಮಾದಲೆ, ದೊರೆ ನಿನ್ನನ್ನು ಗಡಿಪಾರು ಮಾಡಿಲ್ಲ."

"ಅಕ್ಕ, ತಂದೆ ನನ್ನನ್ನು ಅರಮನೆಯಿಂದ ಓಡಿಸಿಲ್ಲವೆಂದು ಹೇಳುವೆಯಾ?" ಮಾದಲಾಂಬಿಕೆಯ ಕಣ್ಣುಗಳಲ್ಲಿ ಕಿಡಿಗಳು ಮಿನುಗಿದುವು. "ನಾನು ಬೇರೆಯಲ್ಲ; ನೀನು ಬೇರೆಯಲ್ಲ; ನಮ್ಮ ದೇಹವೆರಡಾದರೂ, ಈರ್ವರ ಪ್ರಾಣಗಳು ಒಂದೇ ಎಂಬ ಆ ಪ್ರೀತಿಯ ಸಲೆ ನಿನ್ನ ಎದೆಯಲ್ಲಿ ಬತ್ತಿ ಹೋಯಿತೇ? ಅಕ್ಕ, ನಾವು ಪರಸ್ಪರ ಅಗಲಿ ಬೇರೆ ಬೇರೆಯಾಗಿರಲು ಶಕ್ಯವೇ? ಗದ್ದುಗೆಗೆ ಒಬ್ಬ ಹಕ್ಕುದಾರಿಣಿ ಬೇಕಾದರೆ ಬೇರೊಬ್ಬಳನ್ನು ದೊರೆ ಹುಡುಕಿಕೊಳ್ಳಲಿ. ನಾನು ನಿನ್ನನ್ನು ತೊರೆದು ಇರಲಾರೆ. ನಾವು ಯಾರಿಗೂ ತಿಳಿಯದಂತೆ ಅರಮನೆಯಿಂದ ಪಾರಾಗಿ ಹೋಗುವುದು ಹೇಗೆ ಎಂಬುದನ್ನು ಆಲೋಚಿಸುವ."

"ನಾವೆಲ್ಲಿಗೆ ಹೋಗುವುದು? ಎಲ್ಲಿ ನಮ್ಮ ಹಿತಚಿಂತಕರು ಇರುವರು?"

"ಹುದುಗೂರು ಅರಣ್ಯಕ್ಕೆ ಹೋಗುವ; ನನ್ನ ದೊಡ್ಡಪ್ಪನನ್ನು ಅರಸಲು!"

---

## ಐದು

ರಾಜಕುಮಾರಿಯರು ಅರಮನೆಯನ್ನು ತೊರೆದು ಕಾಡನ್ನು ಸೇರಲು ನಿರ್ಧರಿಸಿದರು. ಹುದುಗೂರು ಕಾನನಕ್ಕೆ ತೆರಳಿದರೆ ತನ್ನ ತಂದೆಯನ್ನು ಕಾಣಬಹುದೆಂಬ ಆಶೆ ನೀಲಾಂಬಿಕೆಯ ಎದೆಯಲ್ಲಿ ಉತ್ಸಾಹವನ್ನು ಕುದುರಿಸಿತು. ಮಾದಲಾಂಬಿಕೆಯನ್ನು ಜತೆಯಲ್ಲಿ ಕರೆದುಕೊಂಡು ಹೋಗಲು ಅವಳು ಒಪ್ಪಿದಳು. ಅಕ್ಕನ ಒಡನಾಟ ತನಗೆ ತಪ್ಪುವುದಿಲ್ಲವೆಂದು ಅರಿತಾಗ ಮಾದಲಾಂಬಿಕೆಯ ಮೊಗ ಅರಳಿದ ಅಲರಂತಾಯಿತು.

ಆದರೆ ಹುದುಗೂರು ಅರಣ್ಯಕ್ಕೆ ಹೋಗುವುದು ಹೇಗೆಂಬುದು ಅವರ ಮುಂದಿರುವ ಸಮಸ್ಯೆಯಾಯಿತು. ಹುದುಗೂರು ಕಾಡು ರಾಜಧಾನಿಯಿಂದ ಅನೇಕ ಗಾವುದ ದೂರದಲ್ಲಿದೆ. ಈರ್ವರೂ ಹಾದಿಯನ್ನರಿಯದವರು; ಅರಮನೆಯಲ್ಲಿ ಬಳೆದ ಹೆಣ್ಣುಗಳು. ಮಾರ್ಗ ಸುರಕ್ಷಿತವಾದುದಲ್ಲ. ಕಳ್ಳಕಾಕರ ಭಯವಿದೆ. ಅಡವಿಯನ್ನು ಹಾಯುವಾಗ ಕ್ರೂರ ಜಂತುಗಳ ಭೀತಿಯಿದೆ. ತರುಣಿಯರಿಗೆ ಮಾರ್ಗದರ್ಶಕರಿಲ್ಲ; ಪಯಣ ಗೈಯ್ಯಲು ವಾಹನಗಳ ಸೌಕರ್ಯವಿಲ್ಲ. ಸಂಗಡ ಯಾರನ್ನಾದರೂ ಕರೆದುಕೊಂಡು ಹೋದರೆ ತಮ್ಮ ರಹಸ್ಯ ಬಯಲಾಗುವುದು. ಗೋಪ್ಯವಾಗಿ ಈ ದುಸ್ಸಾಧ್ಯ ಪ್ರಯಾಣವನ್ನು ಕೈಗೊಳ್ಳುವುದು ಹೇಗೆ ಎಂಬುದು ಅವರ ಬುದ್ಧಿಯನ್ನು ಕದಡಿಸುವ ಚಿಂತೆಯಾಯಿತು.

"ಅಕ್ಕ, ನಾವು ಅರಮನೆಯನ್ನು ತೊರೆದ ಮೇಲೆ ಸಾಮಾನ್ಯ ಪ್ರಜೆಗಳಂತೆ ಪ್ರಯಾಣವನ್ನು ಕೈಗೊಳ್ಳಬೇಕು. ಬೆಲೆಯುಳ್ಳ ಉಡಿಗೆತೊಡಿಗೆಗಳ, ಅಮೂಲ್ಯ ರತ್ನಾಭರಣಗಳ ಅಗತ್ಯವಿಲ್ಲ." ಮಾದಲಾಂಬಿಕೆ ತನಗೆ ಹೊಳೆದ ಒಂದು ಉಪಾಯವನ್ನು ಅಕ್ಕನಿಗೆ ಸೂಚಿಸಿದಳು. "ಅವುಗಳನ್ನೆಲ್ಲಾ ನಾವು ಮಾರಿಬಿಡೋಣ. ದಾರಿವೆಚ್ಚಕ್ಕೆ ಹಣ ದೊರೆತಂತಾಗುವುದು. ದಾರಿಯಲ್ಲಿ ಕಳ್ಳಕಾಕರ ಭಯ ಬೇರೆಯಿದೆ. ನಾವು ಹಳ್ಳಿಗಾಡಿನ ಹೆಣ್ಣುಗಳಂತೆ ಉಡಿಗೆ ತೊಡಿಗೆಗಳನ್ನು ತೊಟ್ಟು ಪ್ರಯಾಣ ಮಾಡುವುದು ಲೇಸು.

"ಮಾದಲೆ, ನಿನ್ನ ಹಂಚಿಕೆ ಚಲೋದಿದೆ." ನೀಲಾಂಬಿಕೆ ತನಗೆ ಹೊಳೆದ ಉಪಾಯವನ್ನು ತಂಗಿಗೆ ತಿಳಿಸತೊಡಗಿದಳು. "ಹುದುಗೂರು ಕಾಡಿಗಿರುವ ದಾರಿ ಬಹಳ ಉದ್ದವಾದುದು. ಇಬ್ಬರು ಹೆಂಗಸರು ಮಾತ್ರ,

ಪ್ರಯಾಣಮಾಡುವುದು ಅಪಾಯಕರ. ದುಷ್ಟರ ಕಣ್ಣು ನಮ್ಮ ಮೇಲೆ ಬಿದ್ದು ಏನಾದರೂ ಅಪಾಯ ಒದಗಬಹುದು."

"ಅದು ನಿಜ, ದಾರಿಯಲ್ಲಿ ಪೋಲಿ ಘಟಿಂಗರು ನಮ್ಮನ್ನು ಪೀಡಿಸಬಹುದು. ಅದರಿಂದ ಪಾರಾಗಲು ಏನು ಮಾಡುವ ಅಕ್ಕ?"

"ನೋಡು ತಂಗಿ, ನಮ್ಮಿರ್ವರಲ್ಲಿ ಒಬ್ಬಳು ಗಂಡಸಿನ ವೇಷವನ್ನು ತಾಳುವುದು ಇನ್ನಷ್ಟು ಕ್ಷೇಮಕರ." ನೀಲಾಂಬಿಕೆ ತನ್ನ ಹಂಚಿಕೆಯನ್ನು ಬಿಚ್ಚತೊಡಗಿದಳು. "ನಮ್ಮಿಬ್ಬರಲ್ಲಿ ನಾನು ಎತ್ತರವಾಗಿರುವೆನು. ಗಂಡುಡುಗೆ ನನಗೆ ಚೆನ್ನಾಗಿ ಒಪ್ಪುವುದು. ದಾರಿಯಲ್ಲಿ ನಮ್ಮನ್ನು ಕಂಡವರು ಅಣ್ಣತಂಗಿ ಯೆಂದು ಭಾವಿಸುವರು. ಎಡಗೈಯಲ್ಲೊಂದು ಕಿರುಗೊಡಲಿ, ಬಲಗೈಯ್ಯ ಲ್ಲೊಂದು ಈಟಿ. ತೋಳಿನಲ್ಲೊಂದು ಬಿಲ್ಲು; ಬೆನ್ನಮೇಲೆ ಸರಳು ತುಂಬಿದ ದೊಣೆ,—ಈ ಬಗೆಯ ವೀರವೇಷ, ನಮ್ಮ ಹತ್ತಿರ ಸುಳಿಯುಬಹುದಾದ ದುಷ್ಟ ರನ್ನು ದೂರವಿರಿಸುವುದು. ಈ ಬಗೆಯಲ್ಲಿ ವೀರಾಳಿನ ವೇಷ ಹೊರಗೆ ವಿರಾಜಿ ಸುತ್ತಿದ್ದರೂ, ಒಳಗೆ ಭಯ-ಶಂಕೆಗಳಿಗೆ ಆಸರೆಯೆನಿಸಿದ ಸ್ತ್ರೀಹೃದಯವೇ ಇರುವುದು. ಆದರೆ ಗಂಡುವೇಷವನ್ನು ಹೊತ್ತ ಪುರುಷರೆಲ್ಲರೂ ಧೀರರಲ್ಲ. ಅನೇಕರ ಗಂಡುಡುಗೆ,-ಕೈಯ ಕರವಾಳ,-ಇವುಗಳ ಮರೆಯಲ್ಲಿ ಹಂದೆಯ ಅಳ್ಳೆದೆಯಿರುವುದು."

"ಅಕ್ಕ, ನಿನ್ನ ಹಂಚಿಕೆಯನ್ನು ಕೇಳುವಾಗ ನನ್ನ ಮೈ ಕೌತುಕದಿಂದ ರೋಮಾಂಚನ ತಾಳುತ್ತಿದೆ. ಎಷ್ಟೊಂದು ಕುತೂಹಲಕಾರಿ ಸನ್ನಿವೇಶ. ಕಾಡುಹಾದಿಯನ್ನು ಹಿಡಿದು ನಾವಿಬ್ಬರೇ ಸಾಗುತ್ತಿರುವೆವು. ನೀನು ನನ್ನ ರಕ್ಷಣೆಗೆಂದು ಪುರುಷವೇಷವನ್ನು ತೊಟ್ಟಿರುವೆ. ಯಾವನಾದರೂ ನೀಚಾತ್ಮ ಪಾಪದೃಷ್ಟಿಯಿಂದ ನನ್ನನ್ನು ನೋಡಿದನಾದರೆ,—ನಿನ್ನ ಕೈಗೊಡಲಿ ಅವನ ರುಂಡವನ್ನು ಉರುಳಿಸುವುದು. ಎತ್ತಲೂ ಹಚ್ಚಹಸಿಯ ತಳಿರುಗಳಿಂದ ಕೂಡಿದ ಗಿಡಬಳ್ಳಿಗಳು! ಬಗೆಬಗೆಯ ಹಕ್ಕಿಗಳ ಹಾಡುಗಳು ಬೆಳಿಗ್ಗೆ ನಮ್ಮನ್ನು ನಿದ್ದೆಯಿಂದೆಚ್ಚರಿಸುವ ಉದಯರಾಗಗಳಾಗುವುವು. ಗಿಡಗಳಲ್ಲಿ ಜೋಲು ತ್ತಿರುವ ಹಣ್ಣುಹಂಪಲುಗಳೇ ನಮ್ಮ ಆಹಾರ. ತೊರೆಯ ಶೀತಲ ಸ್ವಾದೋ ದಕವೇ ನಮ್ಮ ಪಾನೀಯ. ಎಷ್ಟು ಸೊಗಸು! ಎನಿತು ಚೆಲುವು! ಅಕ್ಕ, ನಾವು ಈ ಬಗೆಯ ಹೊಸಹುಟ್ಟನ್ನು ಪಡೆದ ಮೇಲೆ, ನಮಗೆ ಹೊಸ ಹೆಸರು ಗಳೂ ಬೇಡವೆ? ಅರಣ್ಯಜೀವನಕ್ಕೆ ಈಗಿನ ಹಳೆಯ ಹೆಸರುಗಳು ಒಪ್ಪವು."

"ನಾವು ಹೊಸ ಹೆಸರುಗಳನ್ನು ತಾಳೋಣ."

"ಅಕ್ಕ, ಹಾಗಾದರೆ ನಿನ್ನನ್ನು ಯಾವ ಹೆಸರಿನಿಂದ ಕರೆಯಲಿ?"

"ಗಣಪನೆಂದು ಕರೆ."

"ತುಂಬಾ ಒರಟಾದ ಹೆಸರು. ಆ ಹೆಸರು ಕೇಳಿದೊಡನೆಯೇ ಆನೆ ಮೊಗದ ದೇವರ ನೆನಪಾಗುವುದು. ಆ ದೇವನ ಮೊಗದಂತೆ ನಿನ್ನ ಮುಖ ಕರಾಳವಾಗಿದ್ದರೆ ಆ ಹೆಸರನ್ನು ನಾನು ಒಪ್ಪುತ್ತಿದ್ದೆ."

"ಮಾರ್ತಾಂಡದೇವ."

"ಹೆಸರು ತುಂಬಾ ಸಂಸ್ಕೃತವಾದುದು. ಹಳ್ಳಿಗಾಡಿನ ಜನ ಇಟ್ಟುಕೊಳ್ಳುವ ಹೆಸರು ಇದಲ್ಲ."

"ನಿಲ್ಲು, ಯೋಚಿಸುತ್ತೇನೆ. ಗಿರೀಶ—ಊಹುಂ ಆಗದು. ತುಂಬಾ ನಾಗರಿಕವಾದುದು. ಹೂವಯ್ಯ ಎಂದಾದರೆ!"

"ಭೇಷ್, ಅಕ್ಕ,—ಈಗ ನಿನ್ನ ಮತಿಗೆ ಕವಿದಿದ್ದ ಮಂಕು ಕರಗಿತು."

"ಏಕೆ ಮಾದಲೆ ಹಾಗೆ ನುಡಿಯುವೆ?"

"ಗಣಪ-ಮಾರ್ತಾಂಡಗಳು ತುಂಬಿದ್ದ ನಿನ್ನ ಮನಸ್ಸಿಗೆ ಹೂವಯ್ಯನೆಂಬ ಹೆಸರು ತೋಚಬೇಕಾದರೆ? ನಾಜೂಕಾದ ಹೆಸರು. ಗಂಡುಡುಗೆಯಲ್ಲಿರುವ ಹೆಣ್ಣಿಗೆ ತಕ್ಕುದಾದುದು. ಈಗ ನನಗೊಂದು ಹೆಸರನ್ನು ಆರಿಸಿ ಹೇಳು.

"ಊಹುಂ, ನನ್ನಿಂದಾಗದು! ನನಗೆ ಬೇಕಾದ ಹೆಸರನ್ನು ನಾನು ಆರಿಸಿಕೊಂಡೆ. ನಿನಗೆ ಬೇಕಾದುದನ್ನು ನೀನು ಆರಿಸಿಕೋ."

"ಆದರೆ, ನಾನು ಮಂಕುಸಾಂಬ್ರಾಣಿ. ನನ್ನ ದಪ್ಪಬುದ್ಧಿಗೆ ನಯವಾದ ಹೆಸರುಗಳು ಹೇಗೆ ಹೊಳೆದಾವು? ನೀನೇ ಹೆಸರುಗಳನ್ನು ಹೇಳು. ನನ್ನ ಮನಒಪ್ಪಿದುದನ್ನು ಆರಿಸಿಕೊಳ್ಳುವೆನು."

"ಆಗಲಿ, ನಿನ್ನ ಹೆಸರು ರನ್ನೆಯೆಂದಿದ್ದರೆ."

"ರನ್ನೆ—ನನ್ನಲ್ಲಿ ರತ್ನಗಳಿಲ್ಲದಿದ್ದರೂ, ಆ ಹೆಸರನ್ನು ಕೇಳಿ ಕಳ್ಳರು ನನ್ನ ಪಕ್ಕದಲ್ಲಿ ಸುಳಿದಾರು! ದಾರಿಯಲ್ಲಿ ಕಳ್ಳಕಾಕರ ಭೀತಿಯಿದೆಯೆಂದು ಬೇರೆ ನೀನು ಹೇಳಿದೆ."

"ಚೆನ್ನಿ—"

"ಆ ಹೆಸರು ಬಹು ಸಾಮಾನ್ಯವಾದುದು."

"ಬಂಗಾರಿ."

"ಬಿಂಕವಿಲ್ಲದ ಬಂಗಾರಿ ಶೋಭಿಸಲಾರಳು."

"ಮಲ್ಲಿಗೆ"

"ಭೇಷ್! ಚೆನ್ನಾಗಿದೆ! ಹೂವಯ್ಯ—ಮಲ್ಲಿಗೆ, ಸರಿಹೋಯಿತು. ಮುದ್ದಾಗಿದೆ."

ಹೀಗೆ ಮಾದಲಾಂಬಿಕೆ ಮಲ್ಲಿಗೆಯೆಂಬ ಹೆಸರನ್ನು ಒಪ್ಪಿದಳು.

ಅಂದು ರಾತ್ರಿಯೇ ರಾಜಕುಮಾರಿಯರು ಅರಮನೆಯನ್ನು ತೊರೆದು ಅರಣ್ಯಪಥವನ್ನು ಹಿಡಿಯಲು ನಿರ್ಧರಿಸಿದರು. ಅವರು ಬೆಲೆಯುಳ್ಳ ರತ್ನಾಭರಣಗಳನ್ನು ಗಂಟುಕಟ್ಟಿದರು. ನೀಲಾಂಬಿಕೆ ತಾನುಟ್ಟ ದಿವ್ಯ ಪ್ರಸಾಧನಗಳನ್ನು ಕಳಚಿ ಪುರುಷವೇಷವನ್ನು ಧರಿಸಿ ಹೂವಯ್ಯನಾದಳು. ಮಾದಲಾಂಬಿಕೆ ಹಳ್ಳಿಗಾಡಿನ ಹೆಣ್ಣಿಗೊಪ್ಪುವ ಸಾಮಾನ್ಯವಾದ ಉಡಿಗೆತೊಡಿಗೆಗಳನ್ನು ಧರಿಸಿ ಮಲ್ಲಿಗೆಯಾದಳು. ಸಾಮಾನ್ಯವಾದ ವಸ್ತ್ರಗಳು ಮಾದಲಾಂಬಿಕೆಯ ಸೌಂದರ್ಯವನ್ನು ಕುಂದಿಸಲಿಲ್ಲ; ಅವಳು ಕಲೆಗಳುಳ್ಳ ಪೂರ್ಣಚಂದ್ರಬಿಂಬದಂತೆ ಇನ್ನಷ್ಟು ಅಂದವಾಗಿ ತೋರಿದಳು.

ಅಂದು ಇರುಳು ರಾಜಮಂದಿರದ ಜನವೆಲ್ಲ ಸವಿನಿದ್ದೆಯ ತೆಕ್ಕೆಗೊಳಗಾಗಿದ್ದಾಗ, ಈ ಅರಗುವರಿಯರು ಯಾರಿಗೂ ತಿಳಿಯದಂತೆ ಗುಪ್ತಮಾರ್ಗದ ಮೂಲಕ ತಮ್ಮ ಶಯನ ಗೃಹಗಳಿಂದ ಹೊರಬಿದ್ದರು. ತರುಣಿಯರ ಸಾಹಸೋದ್ಯಮವನ್ನು ನಿಟ್ಟಿಸಿದ ತಾರೆಗಳು ಮಂದಹಾಸವನ್ನು ಬೀರಿದುವು. ಅವರ ಸಾಹಸವನ್ನು ಮೆಚ್ಚಿ ಪ್ರಶಂಸೋದ್ಗಾರಗಳನ್ನು ಹೊರಚೆಲ್ಲುತ್ತಿರುವನೋ ಎಂಬಂತೆ, ಚಂದ್ರ ಮೋಡದ ತೆರೆಯನ್ನು ಓಸರಿಸಿ ಬಂದು ನಗೆಯಲರನ್ನು ಹೊರಚೆಲ್ಲಿದ.

ರಾಜಕುಮಾರಿಯರು ಅರಮನೆಯಿಂದ ತಪ್ಪಿಸಿಕೊಂಡುಹೋದ ಸುದ್ದಿ ದೊರೆ ವೀರವರ್ಮನಿಗೆ ತಿಳಿಯಿತು. ನೀಲಾಂಬಿಕೆ ತನ್ನ ಮಗಳನ್ನು ಸವಿಮಾತುಗಳಿಂದ ಮರಳುಮಾಡಿ, ತನ್ನ ಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಕರೆದುಕೊಂಡು ಹೋದಳೆಂದು ಅವನು ಊಹಿಸಿದ. ಅವನ ಚಿತ್ತ ಕೋಪಾಗ್ನಿಯಿಂದ ಪರಿತಪ್ತವಾಯಿತು. ಅವನು ತಳಾರನನ್ನು ಕರೆತರಲು ದೂತರನ್ನು ಅಟ್ಟಿದ.

ತಳಾರ ರಾಜಸನ್ನಿಧಿಗೆ ಬಂದು ವಂದಿಸಿ "ಅಪ್ಪಣೆಯೇನು?" ಎಂದು ಕೇಳಿದ.

"ನೀಲಾಂಬಿಕೆ ರಾಜಕುಮಾರಿಯನ್ನು ಕರೆದುಕೊಂಡು ಕಣ್ಮರೆಯಾಗಿರುವಳು." ಕೋಪದಿಂದ ದೊರೆ ಗುಡುಗಿದ. "ನೀನು ಚಾರರನ್ನು ಅಟ್ಟಿ ಅವಳೆಲ್ಲಿದ್ದರೂ ಅವಳನ್ನು ಇಪ್ಪತ್ತನಾಲ್ಕು ತಾಸುಗಳೊಳಗೆ ಹಿಡಿದು ತರಬೇಕು."

"ಹಸಾದ!" ಎಂದು ತಳಾರ ರಾಜನಿಗೆ ಬಾಗಿ ಕೈಮುಗಿದ.

ಆಸ್ಥಾನದ ಸಭಿಕರಲ್ಲಿ ಒಬ್ಬ ಮುಂದೆ ಬಂದು, "ನಮ್ಮೊಡೆಯ, ಮೊನ್ನಿನ ಮಲ್ಲಯುದ್ಧದಲ್ಲಿ ಜಟ್ಟಿ ಚೆಲುವಯ್ಯನ ಮೂಳೆ ಮುರಿದ ಅಪ್ಪಾಜಿಯೊಡನೆ ರಾಜಕುಮಾರಿಯರು ಗೋಪ್ಯ ವಚನಗಳನ್ನಾಡುತಿದ್ದುದನ್ನು ಅಂತಃಪುರದ ದಾಸಿಯೊಬ್ಬಳು ಕೇಳಿರುವಳು. ರಾಜಕುಮಾರಿಯರು ಎಲ್ಲಿಗೆ ತೆರಳಿದರೂ ಸಹ ಅವರ ಸಮೀಪದಲ್ಲಿ ಆ ಪೋರ ಇದ್ದೇ ಇರುವನೆಂದು ಆ ದಾಸಿ ಹೇಳುತ್ತಿರುವಳು." ಎಂದು ಅರಿಕೆ ಮಾಡಿದ.

ನೀಲಾಂಬಿಕೆಯ ಮೇಲೆ ಕಿಡಿಗಾರುತಿದ್ದ ದೊರೆಯ ಕೋಪ ಈಗ ಅಪ್ಪಾಜಿಯ ಕಡೆ ಹೊರಳಿತು. ಅವನ ಕಣ್ಣುಗಳು ಉರಿವ ಇಂಗಳಗಳನ್ನು ಮಳೆಗರೆದುವು. ಅವನ ಧ್ವನಿ ಭೀಷಣವಾಯಿತು.

"ಆ ಯುವಕನನ್ನು ಸೆರೆಹಿಡಿದು ಓಲಗಕ್ಕೆ ಕಳುಹಿಸುವಂತೆ ಅವನ ಅಣ್ಣನಿಗೆ ಅರುಹಿರಿ." ದೊರೆ ದೂತರನ್ನು ಕರೆದು ಆಜ್ಞಾಪಿಸಿದ. "ತಮ್ಮ ದೊರೆಯದಿದ್ದರೆ, ಅಣ್ಣನನ್ನು ಬಂಧಿಸಿ ಆಸ್ಥಾನಕ್ಕೆ ಎಳೆದು ತನ್ನಿರಿ. ಅವನು ಕಾಣೆಯಾದ ತಮ್ಮನನ್ನು ಅರಸಿ ತರುವಂತೆ ನಾನು ಮಾಡುವೆನು. ನಮ್ಮ ಗುಪ್ತಚಾರರು ರಾಜಕುಮಾರಿಯರನ್ನು ಹಳ್ಳಿ ಹಳ್ಳಿಗಳಲ್ಲಿ ಕಾಡುಮೇಡುಗಳಲ್ಲಿ ಅರಸಲಿ. ಅವರನ್ನು ಕೈಸೆರೆ ಹಿಡಿದು ರಾಜಾಸ್ಥಾನಕ್ಕೆ ಕರೆತರಲಿ!"

"ಹಸಾದ"ವೆಂದು ರಾಜದೂತರು ತಲೆಬಗ್ಗಿಸಿ, ರಾಜಾಜ್ಞೆಯನ್ನು ತಮ್ಮ ಮಸ್ತಕದಲ್ಲಿ ಆಂತರು.

---

# ಆ ರು

ಮಾಲೂರು ರಾಚಯ್ಯ ಪದಚ್ಯುತ ರಾಜ ಗುಣವರ್ಮನ ಆಪ್ತಕೋಟಿಗೆ ಸೇರಿದವನಾಗಿದ್ದ. ರಾಚಯ್ಯನ ಸತ್ಯಸಂಧತೆ,-ಸ್ವಾಮಿನಿಷ್ಠೆ ನ್ಯಾಯಪರತೆ ಮೊದಲಾದ ಉದಾತ್ತ ಗುಣಗಳು ಚೆಂಗಾಳ್ವರ ನಾಡಿನಲ್ಲಿ ಮನೆಮಾತಾಗಿದ್ದುವು. ಅವನು ಗುಣವರ್ಮನ ಬಲಗೈಯಂತಿದ್ದು ರಾಜಗದ್ದುಗೆಗೆ ಆಧಾರಭೂತನಾಗಿದ್ದ. ಅವನಿಗೆ ಮೂರುಮಂದಿ ಪುತ್ರರಿದ್ದರು. ಅವರಲ್ಲಿ ಹಿರಿಯನ ಹೆಸರು ಓಬಲಯ್ಯ;' ಎರಡನೆಯವನು ಜಾಕಪ್ಪ ಮತ್ತು ಕೊನೆಯವನೇ ಅಪ್ಪಾಜಿ.

ತಂದೆ ಸಾಯುವಾಗ ಅಪ್ಪಾಜಿ ಇನ್ನೂ ಬುದ್ಧಿಯರಿದ ಹಸುಳೆಯಾಗಿದ್ದ; ರಾಚಯ್ಯ ಮರಣಶಯ್ಯೆಯಲ್ಲಿ ನರಳುತ್ತಿದ್ದಾಗ, ತನ್ನ ಕೊನೆಯ ಮಗನ ಭವಿತವ್ಯದ ಚಿಂತೆ ಅವನನ್ನು ಪೀಡಿಸತೊಡಗಿತು. ಅಣ್ಣಂದಿರಿಬ್ಬರು ತಮ್ಮನಿಗೆ ಯೋಗ್ಯರೀತಿಯ ಶಿಕ್ಷಣವನ್ನೊದಗಿಸಿ-ಅವನ ಅಭಿವೃದ್ಧಿಯನ್ನು ಸಾಧಿಸುವರೋ ಎಂಬ ಸಂದೇಹ ರೋಗಿಯನ್ನು ಬಾಧಿಸತೊಡಗಿತು. ಏಕೆಂದರೆ ಓಬಲನಾಗಲೀ, ಜಾಕಪ್ಪನಾಗಲೀ, ತಮ್ಮ ಕಿರಿಯ ತಮ್ಮನಲ್ಲಿ ಪ್ರೀತಿವಿಶ್ವಾಸವುಳ್ಳವರಾಗಿರಲಿಲ್ಲ. ಅವರಿಬ್ಬರೂ ತಂದೆಯ ಮುದ್ದಿಗೆ ಒಳಗಾದ ಅಪ್ಪಾಜಿಯನ್ನು ಅಸೂಯೆ ಬೆರೆತ ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದರು.

ರಾಚಯ್ಯ ತಾನಿನ್ನು ಹೆಚ್ಚುದಿನ ಬದುಕಲಾರೆನೆಂದು ತಿಳಿದ. ಅವನು ಹಿರಿಯಮಗ ಓಬಲನನ್ನು ತನ್ನ ಸಮೀಪಕ್ಕೆ ಕರೆದ, “ನೋಡು, ಓಬಲ, ನಾನು ಇನ್ನು ಹೆಚ್ಚುದಿನ ಬಾಳಲಾರೆ. ಕಾಲನ ಕರೆ ಬಂದಿದೆ. ನೀವಿಬ್ಬರೂ ಬಳೆದು ವಿದ್ಯಾಬುದ್ಧಿಗಳನ್ನು ಕಲಿತಿರುವಿರಿ. ನಿಮ್ಮ ಬಾಳುವೆಯನ್ನು ಹಸನಾಗಿಸಲು ಶಕ್ತರಾಗಿರುವಿರಿ. ಆದರೂ ಒಂದು ಚಿಂತೆಯ ಕೀಟ ನನ್ನ ಎದೆಯನ್ನು ಕೊರೆಯುತ್ತಲಿದೆ. ಅಪ್ಪಾಜಿ ಇನ್ನೂ ಹಸುಳೆ. ತನ್ನ ಯೋಗಕ್ಷೇಮಗಳನ್ನು ತಾನೇ ನೋಡಿಕೊಳ್ಳಲು ಶಕ್ತನಾಗಿಲ್ಲ. ವಿದ್ಯಾಬುದ್ಧಿಗಳನ್ನು ಕಲಿತಿಲ್ಲ. ಅವನ ಲಾಲನೆ ಪಾಲನೆಗಳ ಹೊಣೆಯನ್ನು ನಾನು ನಿನಗೊಪ್ಪಿಸುವೆನು. ನಿನಗೆ ಅವನ ಮೇಲೆ ಹೆಚ್ಚಿನ ಪ್ರೀತಿಯಿಲ್ಲವೆಂಬ ಸಂಗತಿಯನ್ನು ನಾನು ಬಲ್ಲೆ. ಆದರೆ ನೀನು ಅವನನ್ನು ಉಪೇಕ್ಷೆ ಮಾಡಕೂಡದು. ನೀನು ಯೋಗ್ಯರಾದ ಐಗಳನ್ನು ಆರಿಸಿತಂದು ನಿನ್ನ ತಮ್ಮನಿಗೆ

ಉತ್ತಮ ಶಿಕ್ಷಣವನ್ನು ಕೊಡಿಸು. ಅವರು ಅವನಲ್ಲಿ ಬೀಜರೂಪದಲ್ಲಿರತಕ್ಕ ಸದ್ಗುಣಗಳಿಗೆ ನೀರೆರೆದು, ಅವುಗಳು ಮೊಳೆತು ಗಿಡವಾಗುವಂತೆ ಕೊನರಿಸಲಿ. ಅಪ್ಪಾಜಿ ನಮ್ಮ ಕುಲಕ್ಕೆ ಯಶಸ್ಸನ್ನು ತರುವ ಉತ್ತಮ ತರುಣನಾಗಿ ಬಳೆಯ ಬೇಕೆಂಬುದೇ ನನ್ನ ಕೊನೆಯ ಹಾರೈಕೆ. ನಮ್ಮ ಹಿಂದಿನ ಪ್ರಭು ಗುಣವರ್ಮ ರಾಜರು ಅರಸುಗೈಯುತ್ತಿದ್ದರೆ, ಅಪ್ಪಾಜಿಯ ಲಾಲನೆ ಪಾಲನೆಗಳನ್ನು ಅವ ರಿಗೇ ನಾನು ಒಪ್ಪಿಸುತ್ತಿದ್ದೆ. ಅವನ ಆರೈಕೆ ಮತ್ತು ಶಿಕ್ಷಣಗಳನ್ನು ನೀನು ಉಚಿತರೀತಿಯಲ್ಲಿ ನಿರ್ವಹಿಸುವಿಯೆಂದು ವಾಗ್ದಾನಮಾಡಿದರೆ ನಾನು ನಿಶ್ಚಿಂತೆ ಯಿಂದ ಕೊನೆಯುಸಿರನ್ನು ಬಿಡುವೆನು" ಎಂದು ಹೇಳಿದ.

"ಅಪ್ಪಾ, ನೀನು ಅಪ್ಪಾಜಿಯ ವಿಷಯದಲ್ಲಿ ಯಾವ ಚಿಂತನೆಯನ್ನೂ ಹಚ್ಚಿಕೊಳ್ಳುವುದು ಬೇಡ. ಅವನು ಎಷ್ಟಾದರೂ ನನ್ನ ತಮ್ಮನೇ ಅಲ್ಲವೇ? ಅವನ ಶಿಕ್ಷಣ ಪೋಷಣೆಗಳ ಹೊಣೆಯನ್ನು ನಿನ್ನ ಆತ್ಮಕ್ಕೆ ತೃಪ್ತಿಯಾಗುವಂತೆ ನಾನು ನಿರ್ವಹಿಸುವೆನು." ಎಂದು ಮಾರ್ನುಡಿದ ಓಬಲ ತಂದೆಯ ಪಾದ ಗಳನ್ನು ಮುಟ್ಟಿ ಪ್ರಮಾಣಮಾಡಿದ.

ಮಗನು ಮಾಡಿದ ಪ್ರಮಾಣದಲ್ಲಿ ರಾಚಯ್ಯನಿಗೆ ವಿಶ್ವಾಸ ಹುಟ್ಟಿತು. ಅವನ ಎದೆಯ ಮೇಲಿನಿಂದ ಒಂದು ಹೊರೆಯನ್ನು ಇಳಿಸಿದಂತಾಯಿತು. ಓಬಲ ಕೊನೆಯಮಗ ಅಪ್ಪಾಜಿಯನ್ನು ಕಾಡುಪಾಲು ಮಾಡನು ಎಂದು ಅವನು ಧೈರ್ಯತಾಳಿದ. ಮುಂದೆ ಒಂದೆರಡು ದಿನಗಳಲ್ಲಿ ಅವನು ಜೀವನ ಯಾತ್ರೆಯನ್ನು ಮುಗಿಸಿ, ಮರಳಿ ಬಾರದ ನಾಡಿಗೆ ತೆರಳಿದ.

ರಾಚಯ್ಯ ಕಾಲವಾಗಲು ಓಬಲ ಹಿರಿಯ ಮಗನಾದುದರಿಂದ ಮಾಲೂರು ಜಹಗೀರಿಯ ಒಡೆಯನಾದ; ತಂದೆಗೆ ಕೊಟ್ಟ ವಾಗ್ದಾನದಂತೆ ಅಪ್ಪಾಜಿಯ ಪೋಷಣೆ ಶಿಕ್ಷಣಗಳ ಜವಾಬ್ದಾರಿ ಅವನ ಹೆಗಲಮೇಲೆ ಬಿದ್ದಿತು. ಮಾತ್ಸರ್ಯದ ನೆಲೆವೀಡೆನಿಸಿದ ಓಬಲನಲ್ಲಿ ಕರ್ತವ್ಯಪಾಲನೆಯ ಧರ್ಮಬುದ್ಧಿ ಇರಲಿಲ್ಲ. ಆದುದರಿಂದ ತಂದೆಯ ಮರಣಾನಂತರ ಅವನು ತಾನು ಕೊಟ್ಟ ವಚನವನ್ನು ಪಾಲಿಸಲಿಲ್ಲ. ತಮ್ಮನ ಮೇಲೆ ಪ್ರೀತಿಯಿದ್ದರಲ್ಲವೇ ಅವನನ್ನು ಪೋಷಿಸುವುದು? ಓಬಲನದು ಅಸೂಯಾಕುಲಬುದ್ಧಿ; ಕಠಿನ ಹೃದಯ. ರಾಚಯ್ಯನ ಉದಾತ್ತ ಗುಣಗಳು ಯಾವುವೂ ಓಬಲನ ರಕ್ತದಲ್ಲಿರಲಿಲ್ಲ. ಸುಖಾಪೇಕ್ಷೆಯಿಂದ ಕೂಡಿದ ಸ್ವಾರ್ಥಬುದ್ಧಿ ಆತನದು. ತಮ್ಮನಿಗೆ ಯೋಗ್ಯ ವಿದ್ಯೆಯನ್ನು ಕಲಿಸಿ ಅವನನ್ನೇಕೆ ಜಾಣನನ್ನಾಗಿ ಮಾಡಬೇಕು? ಅವನು ವಿದ್ಯೆ

ಕಲಿತು ಚತುರನಾದರೆ ತಂದೆಯ ಆಸ್ತಿಯಲ್ಲಿ ಪಾಲುಕೇಳುವನು. ಅವನು ಜಾಣನಾಗುವುದರಿಂದ ನಷ್ಟವಲ್ಲದೆ ಲಾಭವೇನಿಲ್ಲ. ಅವನು ಓದು ಕಲಿಯದೆ ಮೂಢನಾಗಿಯೇ ಬೆಳೆಯಲಿ ಅದರಿಂದಲೇ ಲಾಭ." ಎಂದು ಓಬಲನ ಸ್ವಾರ್ಥ ಬುದ್ಧಿ ತರ್ಕಿಸಿತು. ಈ ವಾದಸರಣಿಯನ್ನು ಅವನ ಮನಸ್ಸು ಒಪ್ಪಿತು. ಆದುದರಿಂದ ಅವನು ಅಪ್ಪಾಜಿಯನ್ನು ಐಗಳಮಠಕ್ಕೆ ಕಳುಹಲಿಲ್ಲ. ಅವನ ಪೋಷಣೆಯ ವಿಷಯದಲ್ಲಿ ಅಸಡ್ಡೆ ತಾಳಿದ. ಅವನು ತಮ್ಮನ ಊಟ ಉಪಚಾರಗಳಲ್ಲಿ ಸಹ ಅಲಕ್ಷ್ಯಭಾವದಿಂದ ವರ್ತಿಸತೊಡಗಿದ.

ಮನೆಯ ಆಳುಕಾಳುಗಳು ಯಜಮಾನನು ಕಿರಿಯ ತಮ್ಮನನ್ನು ತಿರಸ್ಕಾರ ದೃಷ್ಟಿಯಿಂದ ನೋಡುವುದನ್ನು ಕಂಡರು. ಧನಿಗೆ ಬೇಡವಾದ ಅಪ್ಪಾಜಿಯ ಮೇಲೆ ಅವರಿಗೆ ಗೌರವವಿಲ್ಲದಾಯಿತು. ಅಪ್ಪಾಜಿಯನ್ನು ಅವರು ಅಸಡ್ಡೆಯಿಂದ ಕಾಣತೊಡಗಿದರು. ಅವರು, ಅವನು ಹಿಂದಿನ ಧನಿ ರಾಚಯ್ಯನ ನೆಚ್ಚಿನ ಪುತ್ರನೆಂಬುದನ್ನು ಮರೆತು, ತಮಗಿಂತಲೂ ನಿಕೃಷ್ಟನಾದವನೆಂದು ಭಾವಿಸತೊಡಗಿದರು. ಭಾವನೆಯನ್ನು ವರ್ತನೆ ಹಿಂಬಾಲಿಸಿತು. ಅಪ್ಪಾಜಿ ಅಣ್ಣನ ತಿರಸ್ಕಾರ ನಿಂದನೆಗಳಿಗೆ ಎದೆಯೊಡ್ಡಬೇಕಾದುದು ಮಾತ್ರವಲ್ಲದೆ, ಆಳುಕಾಳುಗಳ ಕುಹಕವಚನಗಳ ಶಲ್ಯಕ್ಕೂ ತನ್ನ ಎದೆಯನ್ನು ಚಾಚಬೇಕಾಗಿ ಬಂತು. ಮನೆಯಲ್ಲಿ ಅಣ್ಣನ ಸಹಪಂಕ್ತಿಯಲ್ಲಿ ಅವನಿಗೆ ಊಟಉಪಚಾರಗಳು ದೊರೆಯದಾದುವು. ಆಳುಕಾಳುಗಳು ತಿಂದುಂಡು ಮಿಕ್ಕಿದ ಕೂಳಿನಿಂದ ಅವನು ಒಡಲನ್ನು ತುಂಬಿಸಬೇಕಾಗಿ ಬಂದಿತು.

ಕೆಲವೊಮ್ಮೆ ಸಂಪಗೆಯ ಗಿಡವನ್ನು ತಂದು ಹೂದೋಟದಲ್ಲಿ ನೆಟ್ಟು, ನೀರೆರೆದು ಪೋಷಿಸಿದರೂ, ಅದು ಹುಲುಸಾಗಿ ಬೆಳೆದು ಸೌರಭಯುಕ್ತ ಕುಸುಮಗಳನ್ನು ನೀಡುವುದು ವಿರಳ. ಆದರೆ ಕಾಡಿನಲ್ಲಿ ಮರದಿಂದ ಸಿಡಿದು ನೆಲಕ್ಕೆ ಬಿದ್ದ ಬೀಜ, ಮಳೆನೀರನ್ನುಂಡು ಮೊಳೆತು ಕೊನರಿ ಗಿಡವಾಗುವುದು; ಮಳೆಗಾಳಿ ಚಳಿಗಳಿಗೆ ಮೈಯೊಡ್ಡಿ ಬೆಳೆದು ನಾಲ್ದೆಸೆಗಳಿಗೆ ಶಾಖೆಗಳನ್ನು ಹರಡಿ ಮಹಾವೃಕ್ಷವಾಗುವುದು; ಕೊನೆಗೆ ಲಕ್ಷಾಂತರ ಮೊಗ್ಗು ಹೂಗಳನ್ನು ಹೊತ್ತು ಕಾಡಿನಲ್ಲೆಲ್ಲಾ ಸೌರಭವನ್ನು ಬೀರುವುದು. ಹೀಗೆ ಕಾಡಿನಲ್ಲಿ ಮೊಳೆತು ಗಿಡವಾದ ಸಂಪಿಗೆಯಂತೆ,—ಅಣ್ಣನ ಲಾಲನೆ ಪಾಲನೆಗಳಿಲ್ಲದೆ ಹೋದರೂ ಅಪ್ಪಾಜಿ ಕಷ್ಟನಿಷ್ಠುರಗಳಿಗೆ ಮೈಯೊಡ್ಡಿ ಪ್ರವರ್ಧಮಾನನಾದ. ಹಳ್ಳಿಯ ಹುಡುಗರೊಡನೆ ನಡೆಸಿದ ಕುಸ್ತಿಗಳಿಂದ ಅವನ ತೋಳುಗಳು ಬಲಿಷ್ಠವಾದುವು.

ಕೆರೆ-ಮಡು ನದಿಗಳಲ್ಲಿ ಈಜಿದುದರಿಂದ ಅವನ ಎದೆ ವಿಶಾಲವಾಯಿತು. ಗುಡ್ಡಬೆಟ್ಟಗಳನ್ನು ಹತ್ತಿ ಇಳಿಯುತ್ತಿದ್ದುದರಿಂದ ಅವನ ತೊಡೆಗಳು ಉಕ್ಕಿನ ಕಂಬಗಳಂತೆ ಕಠಿನವಾದುವು. ಹಣ್ಣು ಹಂಪಲುಗಳನ್ನು ಅರಸಲೆಂದು ಕಾಡು ಮೇಡುಗಳಲ್ಲಿ ಹಲವು ಗಿಡಮರಗಳನ್ನು ಏರುತ್ತಿದ್ದುದರಿಂದ ಅವನ ಕೈಕಾಲು ಗಳು ಚಟುಲಗತಿಯನ್ನು ತಳೆದುವು.

ಅಣ್ಣ ತಮ್ಮನನ್ನು ಐಗಳ ಮಠಕ್ಕೆ ಕಳುಹಿ ಓದುಗಲಿಸಲಿಲ್ಲ. ಆದರೆ ಆ ಕಾರಣದಿಂದ ಅಪ್ಪಾಜಿ ವಿದ್ಯೆಯಿಲ್ಲದವನಾಗಲಿಲ್ಲ. ಗುಡಿಯಲ್ಲಿ ಭಕ್ತರು ಹಾಡುವ ಕೀರ್ತನೆಗಳು ಅವನ ಪಾಲಿಗೆ ಪಾಠಗಳಾದುವು. ತಾನು ಕೇಳಿದ ಹಾಡುಗಳಲ್ಲಿ ಅಡಕವಾದ ನೀತಿಯನ್ನು ಅವನ ಬುದ್ಧಿ ಅರಸಿ ಮೆಲುಕು ಹಾಕತೊಡಗಿತು. ತಾನು ಉಂಡ ವಿವೇಕಸೂಕ್ತಿಗಳನ್ನು ಅವನು ಜೀರ್ಣಿಸಿ ಕೊಂಡು ತನ್ನವುಗಳನ್ನಾಗಿ ಮಾಡಿಕೊಂಡ. ಹರಿದಾಸರು ಮಾಡುತ್ತಿದ್ದ ಹರಿಕಥೆಗಳು ಅವನ ಪಾಲಿಗೆ ಜ್ಞಾನಭಂಡಾರಗಳಾದುವು. ಅವನು ಕೇಳಿದ ಸತ್ಪುರುಷರ ಕಥೆಗಳು ಅವನ ಸುಪ್ತ ಚೇತನವನ್ನು ಜಾಗ್ರತಗೊಳಿಸಿದುವು. ತಾನೂ ಅವರಂತೆಯೇ ಉತ್ತಮನಾಗಬೇಕು; ಉದಾತ್ತಚರಿತನಾಗಬೇಕು; ಹತ್ತು ಜನರಿಗೆ ಬೇಕಾದವನಾಗಿ ಬಾಳಬೇಕು; ಹತ್ತು ಜನರ ಸ್ತುತಿಗೆ ಪಾತ್ರ ನಾಗಬೇಕು. ಹೀಗೆ ಅವನ ಮನಸ್ಸಿನಲ್ಲಿ ಆಶೆಗಳು ಕವಲೊಡೆಯತೊಡ ಗಿದುವು.

ಹೀಗೆ ಮಠಕ್ಕೆ ಹೋಗಿ ಓದು ಕಲಿಯದಿದ್ದ ಅಪ್ಪಾಜಿಗೆ ಪ್ರಪಂಚವೇ ಶಿಕ್ಷಣರಂಗವಾಯಿತು. ಜಗತ್ತು ಅವನಿಗೆ ಜೀವನಕ್ಕೆ ಅಗತ್ಯವೆನಿಸಿದ ತಿಳು ವನ್ನು ಒದಗಿಸಿತು. ಅವನ ಧಮನಿಗಳಲ್ಲಿ ರಾಚಯ್ಯನ ದೇಹದಲ್ಲಿದ್ದ ರಕ್ತವೇ ಹರಿಯುತ್ತಿದ್ದಿತು. ಪ್ರತಿಯೊಂದು ರಕ್ತಕಣದಲ್ಲಿಯೂ ರಾಚಯ್ಯನ ಸತ್ಯ ನಿಷ್ಠೆ, ನ್ಯಾಯಪರತೆ ಮತ್ತು ಸ್ವಾಭಿಮಾನಗಳು ತುಂಬಿದ್ದುವು.

ಅಪ್ಪಾಜಿ ಬಳೆದು ಸುಂದರಾಕಾರದ ಯುವಕನಾದ. ಅವನ ಬುದ್ಧಿ ಬಲಿತು ಪಕ್ವವಾಯಿತು. ಅವನಿಗೆ ಹಿರಿಯಣ್ಣ ಓಬಲನು ಮಾಡುತ್ತಿರುವ ಅನ್ಯಾಯಗಳ ಅರಿವು ಆಗತೊಡಗಿತು. ಅಣ್ಣನ ತಿರಸ್ಕಾರ ಅಸಡ್ಡೆಗಳು ಮುಳ್ಳಿ ನಂತೆ ಅವನ ಅಂತರಂಗವನ್ನು ಚುಚ್ಚತೊಡಗಿದುವು; ಅವನಲ್ಲಿ ಸುಪ್ತವಾಗಿದ್ದ ಸ್ವಾಭಿಮಾನವನ್ನು ಜಾಗ್ರತೆಗೊಳಿಸಿದುವು. ಅವನ ಬುದ್ಧಿ ಆಗಾಗ ಹೀಗೆ ಹೇಳುತ್ತಿದ್ದಿತು: "ನೀನು ನಾಡಿನಲ್ಲಿ ಕೀರ್ತಿಗಳಿಸಿದ ಮಾಲೂರು ರಾಚಯ್ಯನ

ಮಗ. ನಿನಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಸಭ್ಯನನ್ನಾಗಿ ಮಾಡುವೆನೆಂದು ಅಣ್ಣ ಮರಣೋನ್ಮುಖನಾದ ತಂದೆಗೆ ವಾಗ್ದಾನಮಾಡಿದ. ಆದರೆ ಅಣ್ಣ ತಾನಿತ್ತ ಭಾಷೆಯನ್ನು ಪಾಲಿಸಲಿಲ್ಲ. ನಿನ್ನನ್ನು ಹಂದಿನಾಯಿಗಳಿಗಿಂತಲೂ ಕೀಳಾಗಿ ನಡೆಸಿಕೊಳ್ಳುತ್ತಿರುವನು. ಎಷ್ಟು ದಿನ ನೀನು ಈ ಅವಮಾನ ತಿರಸ್ಕಾರಗಳನ್ನು ತಾಳಿಕೊಳ್ಳುವೆ? ನಿನ್ನ ಧಮನಿಗಳಲ್ಲಿ ಹರಿಯುವ ತಂದೆ ರಾಚಯ್ಯನ ನೆತ್ತರು ಈ ಅವಮಾನವನ್ನು ಪ್ರತಿಭಟಿಸೆಂದು ಹೇಳುತ್ತಲಿಲ್ಲವೇ? ನೀನು ಗಂಡಸು. ನಿನ್ನ ತೋಳುಗಳಲ್ಲಿ ಶಕ್ತಿಯಿದೆ. ನಿನಗಾಗುತ್ತಿರುವ ಅನ್ಯಾಯವನ್ನು ತಡೆಯಲು ನೀನೇಕೆ ಅಳುಕುತ್ತಿರುವೆ? ಹೇಡಿಯಾಗಿ ಶತಮಾನ ಬಾಳುವುದರ ಬದಲು ಹುಲಿಯಾಗಿ ಎರಡು ದಿನ ಬದುಕುವುದು ಮೇಲು."

ಈ ಬಗೆಯ ಆಲೋಚನೆಗಳು ಅಪ್ಪಾಜಿಯನ್ನು ಕೆರಳಿಸುತ್ತಿದ್ದುವು. ಆಗುವ ಅನ್ಯಾಯ ಅವಮಾನಗಳಿಗೆ ಸಹನೆಯಿಂದ ತಲೆಬಾಗಿದರೆ, ಅವು ಎಂದಿಗೂ ಕೊನೆಗೊಳ್ಳವು ಎಂಬುದನ್ನು ಅವನು ಬಲ್ಲ. ಅಣ್ಣನಿಗೆ ಬಂಧುಮಿತ್ರರಿದ್ದಾರೆ; ಆಳುಕಾಳುಗಳಿದ್ದಾರೆ. ಸಹಾಯ ಸಂಪತ್ತುಗಳ ನೆರವಿದೆ. ಆದರೆ ತಾನು! ಆಪ್ತಮಿತ್ರರಿಲ್ಲದ ಗತಿಗೇಡಿ! ಮನೆಯ ಆಳುಕಾಳುಗಳ ಎಂಜಲುಕೂಳಿಗೆ ಕೈಯೊಡ್ಡುತ್ತಿರುವ ಭಿಕಾರಿ! ಈ ವಿಶಾಲ ಪ್ರಪಂಚದಲ್ಲಿ ನರಸಜ್ಜನನ್ನು ಬಿಟ್ಟರೆ ತನ್ನವರೆಂಬುವರು ಯಾರೂ ಇಲ್ಲ. ಏನು ಮಾಡುವುದು? ಅಣ್ಣನ ಅನ್ಯಾಯ ಅವಮಾನಗಳನ್ನು ತಡೆಯಲು ಯಾವ ಉಪಾಯವನ್ನು ಕೈಗೊಳ್ಳುವುದು?

ಹೀಗೆ ಚಿಂತೆಗಳ ಸಾಲು ಅಪ್ಪಾಜಿಯ ಚಿತ್ತದಲ್ಲಿ ಸುಳಿಯುತ್ತಿದ್ದುವು. ನರಸಜ್ಜ ಮಾಲೂರು ಜಹಗೀರದಾರರ ಮನೆಯಲ್ಲಿ ಬಹಳ ಹಿಂದಿನಿಂದ ಸೇವೆಗೈಯುತ್ತಿದ್ದ ಆಳು. ಜಹಗೀರಿಯ ಊಳಿಗದಲ್ಲಿ ಅವನ ತಲೆಗೂದಲು ಹಣ್ಣಾಗಿದ್ದಿತು. ಎರಡು ತಲೆಮಾರಿನ ಶಿಶುಗಳನ್ನು ಅವನು ಎತ್ತಿ ಆಡಿಸಿದ್ದ. ಆ ದೊಡ್ಡಮನೆಯಲ್ಲಿ ಅಪ್ಪಾಜಿಯನ್ನು ನೋಡಿ ಪ್ರೀತಿಸಿ, ಕನಿಕರಪಡುತ್ತಿದ್ದವನೆಂದರೆ ನರಸಜ್ಜನೊಬ್ಬನೇ. ನರಸಜ್ಜ ತನ್ನ ಕಿರಿಯ ಧನಿಗಾಗುತ್ತಿರುವ ಅನ್ಯಾಯ ತಿರಸ್ಕಾರಗಳನ್ನು ಕಂಡು ಮರುಗುತ್ತಿದ್ದ. ರಾಚಯ್ಯೊಡೆಯರ ಕಿರಿಯಮಗ ಬೇಡಿ ಒಡಲು ತುಂಬುವ ಕೇಡುಗಾಲ ಬಂದಿತಲ್ಲಾ ಎಂದು ಕಣ್ಣೀರು ಸುರಿಸುತ್ತಿದ್ದ.

ಅಪ್ಪಾಜಿಯಾದರೂ ತನ್ನ ಸಂಕಟಗಳನ್ನು ನರಸಜ್ಜನ ಮುಂದೆ

ತೋಡಿಕೊಳ್ಳುತ್ತಿದ್ದ. ಎದೆಯಳಲನ್ನು ನರಸಜ್ಜನ ಮುಂದೆ ಹೇಳಿಕೊಂಡಾಗ ಅವನ ಎದೆ ಹಗುರವಾಗಿ ಮನಸ್ಸಿಗೆ ಸಮಾಧಾನವೆನಿಸುತಿದ್ದಿತು. ಎಂಭತ್ತು ವರ್ಷಗಳಷ್ಟು ಸುದೀರ್ಘಕಾಲ ಜೀವನದ ಬೇವು-ಬೆಲ್ಲಗಳನ್ನುಂಡ ನರಸಜ್ಜನ ಅನುಭವ ಸಂಪತ್ತು ವಿಪುಲವಾದುದಾಗಿದ್ದಿತು. ಅಪ್ಪಾಜಿ ತನಗಾದ ತಿರಸ್ಕಾರದ ವೃತ್ತಾಂತವನ್ನು ಅರುಹಿ ಸಂಕಟವನ್ನು ತೋಡಿಕೊಂಡಾಗ, ನರಸಜ್ಜ ತನ್ನ ಅನುಭವ ಭಂಡಾರದೊಳಗಿನಿಂದ ಒಂದು ವೃತ್ತಾಂತವನ್ನು ಆರಿಸಿತೆಗೆಯುತ್ತಿದ್ದ; ಅದನ್ನು ಕಿರಿಯ ಧನಿಗೆ ಉಸುರುತ್ತಿದ್ದ. ಆ ಅನುಭವದ ಆಧಾರದ ಮೇಲೆ ಧನಿಯ ದುರವಸ್ಥೆ ಚಿರಕಾಲ ಉಳಿಯದು ಎಂದು ಧೈರ್ಯ ಹೇಳುತ್ತಿದ್ದ. ಕೊನೆಗೆ "ತಾಳಿದವ ಬಾಳಿಯಾನು" ಎಂಬ ಉಕ್ತಿಯೊಡನೆ ತನ್ನ ಮಾತು ಮುಗಿಸುತ್ತಿದ್ದ.

ಅಣ್ಣನು ತನಗೆ ಎಸಗುತ್ತಿರುವ ಅನ್ಯಾಯಗಳನ್ನು ಪ್ರತಿರೋಧಿಸಬೇಕೆಂಬ ತೀವ್ರ ಇಚ್ಛೆ ಅಪ್ಪಾಜಿಯ ಅಂತರಂಗದಲ್ಲಿ ಅಂಕುರಿಸಿದಾಗ,—ಅವನ ಧಮನಿಯ ಪ್ರತಿಯೊಂದು ರಕ್ತಕಣವೂ "ಪ್ರತೀಕಾರ ಮಾಡು", ಎಂದು ಕೂಗಿ ಹೇಳತೊಡಗಿದಾಗ, ಅವನು ರೂಢಿಯಂತೆ ನರಸಜ್ಜನ ಸಲಹೆಯನ್ನು ಪಡೆಯಲು ಅವನ ಸನಿಹಕ್ಕೆ ಐತಂದ.

"ನರಸಜ್ಜ,—ಈ ಅನ್ಯಾಯವನ್ನು ಎಷ್ಟು ದಿನ ತಾಳಲಿ. ಈ ದಿನ ಹಟ್ಟಿಯಲ್ಲಿರುವ ಕಪಿಲೆ ಹಸುವಿನ ಕರುವನ್ನು ನೋಡಿ ಮೈದಡವಲೆಂದು ಹೋದಾಗ, ಅಣ್ಣ ನನ್ನ ಬೆನ್ನಹಿಂದೆ 'ತೋಳ' ನಾಯಿಯನ್ನು ಛೂಬಿಟ್ಟ. ನಾಯಿ ಬಂದು ನನ್ನ ಪಂಚೆ ತುದಿಯನ್ನು ಕಚ್ಚಿ ಎಳೆದು ಹರಿದಾಗ—ನಾನು ಕೈದೊಣ್ಣೆಯಿಂದ ಅದರ ಬೆನ್ನಿಗಪ್ಪಳಿಸಿದೆ. ಅಣ್ಣ 'ನಾಯಿಯನ್ನೇಕೆ ಹೊಡೆದೆ' ಎಂದು ನನ್ನ ಗದರಿಸಿದ. ನಾಯಿ ನನ್ನ ಪಂಚೆಯನ್ನು ಕಚ್ಚಿ ಹರಿಯಿತು ಎಂದು ಹೇಳಿದಾಗ ಅವನು ಏನು ನುಡಿದ ಗೊತ್ತೇ?"

"ಏನು ಹೇಳಿದ ನನ್ನೊಡೆಯಾ?" ಎಂದು ನರಸಜ್ಜ ನಡುವೆ ಬಾಯಿ ಹಾಕಿದ.

"ನೀನು ಸತ್ತರೆ ಒಂದು ಹಿಡಿ ಅನ್ನ ಉಳಿತಾಯವಾಗುವುದು. ತೋಳ ಸತ್ತರೆ ನನ್ನ ಉತ್ತಮವಾದ ಒಂದು ಬೇಟೆನಾಯಿ ಇಲ್ಲವಾಗುವುದು ಎಂದು ಹೇಳಿದ. ನಾನು ನಾಯಿಗಿಂತಲೂ ಕೀಳು. ನನ್ನ ಈ ಹೊಲಸು ಜೀವನಕ್ಕಿಂತಲೂ ನಾಯಿಬಾಳು ಉತ್ತಮ!"

"ತಾಳಿದವ ಬಾಳಿಯಾನು, ನನ್ನ ದೊರೆ."

"ನರಸಜ್ಜ, ನಾನು ನನ್ನ ಸಂಕಟಗಳನ್ನು ಹೇಳಿಕೊಂಡಾಗಲೆಲ್ಲ 'ತಾಳಿದವ ಬಾಳಿಯಾನು ಎಂದು ನೀನು ರಾಗ ಎಳೆಯುತ್ತಿರುವೆ. ಅಣ್ಣ ಹೇಳಿದ ಮಾತುಗಳನ್ನು ನೆನೆಯುವಾಗ ನನ್ನ ನರನರಗಳಲ್ಲಿ ರೋಷ ಉಕ್ಕುತ್ತಿದೆ. ಅವನಂತೆಯೇ ನಾನೂ ಅಪ್ಪನ ಮಗನಲ್ಲವೇ?— ನರಸಜ್ಜ, ಈ ದಿನಗಳಲ್ಲಿ ತಾಳಿದವ ಕೆಟ್ಟ. ಈ ಧಿಕ್ಕಾರ ಅವಮಾನಗಳನ್ನು ಕೊನೆಗಾಣಿಸಲೇಬೇಕು. ನಾನಿನ್ನು ತಾಳಿಕೊಳ್ಳೆ. ನನ್ನ ತೋಳುಗಳಲ್ಲಿಯೂ ಬಲವಿದೆ. ಅವನ ಬೆದರಿಕೆಗಳಿಗೆ ಅಂಜಿ ತಲೆತಗ್ಗಿಸಿ, ನಾಯಿಯಂತೆ ಹೊಟ್ಟೆಹೊರೆಯಲು ನಾನಿನ್ನೂ ಹಸುಗೂಸಲ್ಲ."

"ನನ್ನ ಚಿಕ್ಕದೊರೆ ದುಡುಕಬೇಡಿ. ಎಷ್ಟಾದರೂ ಅವನು ನಿಮ್ಮಣ್ಣ."

"ಹಾಗೆ ಹೇಳಬೇಡ ನರಸಜ್ಜ. ನನ್ನ ಪಾಲಿಗೆ ಅವನು ಅಣ್ಣನಲ್ಲ. ನನ್ನನ್ನು ಯಾವಜ್ಜೀವ ಬಾಧಿಸಲು ಪಣತೊಟ್ಟಿರುವ ಒಂದು ದುಷ್ಟಗ್ರಹ!"

"ಅಪ್ಪಾಜಿಯ ಅಂತರಂಗದಲ್ಲಿ ಧಗಧಗಿಸುತ್ತಿದ್ದ ಪ್ರತಿಭಟನೆಯ ಜ್ವಾಲಾಮುಖಿ ಸಿಡಿದು ಹೊರಹೊಮ್ಮಲು ಹವಣಿಸತೊಡಗಿತು. ಒಂದು ದಿನ ಅವನು ತೋಟದ ಮಾವಿನ ಮರದ ಕೆಳಗೆ ಕುಳಿತಿದ್ದಾಗ ಆ ದಾರಿಗಾಗಿ ಓಬಲ ಬಂದ. ಅವನ ಕಣ್ಣುಗಳು ಅಪ್ಪಾಜಿಯ ಕಡೆ ಸುಳಿದುವು. ಅವನು "ಎಲಾ ಮೈಗಳ್ಳ, ಇಲ್ಲಿ ನನ್ನ ತೋಟದಲ್ಲಿ ನುಗ್ಗಿ ಏನುಮಾಡುತ್ತಿರುವೆ?" ಎಂದು ತಿರಸ್ಕಾರ ಬೆರೆತ ಸ್ವರದಲ್ಲಿ ಪ್ರಶ್ನಿಸಿದ.

"ಏನೂ ಇಲ್ಲ. ಏನನ್ನು ಮಾಡಲೂ ನನಗೆ ನೀನು ಕಲಿಸಿಲ್ಲವಲ್ಲ." ಎಂದು ಸಿಡುಕಿನ ದನಿಯಲ್ಲಿ ಅಪ್ಪಾಜಿ ಮಾರ್ನುಡಿದ. ಅವನು ಕುಳಿತಲ್ಲಿಂದ ಏಳಲಿಲ್ಲ.

"ಅಪ್ಪಾಜಿ, ನೀನು ಸೋಮಾರಿಯಾಗಿದ್ದೀಯೆ." ಹಿರಿಯತನದ ಅಧಿಕಾರ ಸ್ವರದಲ್ಲಿ ಓಬಲ ಹೇಳಿದ. "ಮನುಷ್ಯನಾದವನು ಏನಾದರೊಂದು ಕೆಲಸ ಮಾಡುತ್ತಿರಬೇಕು. ವೇಳೆಯನ್ನು ಹಾಳುಮಾಡುವುದು ಒಳ್ಳೆಯದಲ್ಲ".

"ನಾನೇನು ನಿನ್ನ ದನಗಳನ್ನು ಕಾಯಲೇ?— ಬೇರಾವ ಕೆಲಸವನ್ನು ಮಾಡಲೂ ನೀನು ನನಗೆ ಕಲಿಸಿಲ್ಲ. "ಕುಳಿತಲ್ಲಿಂದ ಏಳುತ್ತಾ ಅಪ್ಪಾಜಿ ಪಡಿನುಡಿದ." ಈ ಮನೆಯಲ್ಲಿ ನನ್ನ ಹೊಟ್ಟೆಗೆ ಸರಿಯಾಗಿ ಹಿಟ್ಟುದೊರಕದು. ತವುಡುತಿಂದು ನಾನು ದಿನಗಳೆಯಲೇ?— ಮಾಲೂರು ಜಹಗೀರುದಾರನ

ತಮ್ಮನಾದರೂ ಹಿಂದೆ ಕುಚೇಲನು ಸಹ ಅನುಭವಿಸದ ಬಡತನದ ಕಷ್ಟಗಳನ್ನು ನಾನು ಅನುಭವಿಸುತ್ತಿರುವೆನು. ಈ ರೀತಿ ಸಂಕಟಗಳನ್ನು ಅನುಭವಿಸಲು ನಾನು ನಿನ್ನ ಯಾವ ಸಿರಿಯನ್ನು ದುಂದುಗಾರನಂತೆ ಸೂರೆಮಾಡಿರುವೆನು ನೀನೇ ಹೇಳು".

"ನೀನು ಯಾರಮುಂದೆ ನಿಂತು ಹರಟುತ್ತಿರುವೆಯೆಂಬುದನ್ನು ಬಲ್ಲೆಯಾ?" ಮುನಿಸಿನ ದನಿ ಓಬಲನ ಕೊರಳಿಂದ ಹೊರಟಿತು.

"ಅಣ್ಣ ನೀನು ಯಾರೆಂಬುದನ್ನು ಬಲ್ಲೆ!" ಅಪ್ಪಾಜಿ ಕೋಪ ಸಮ್ಮಿಶ್ರ ಹಾಸ್ಯಸ್ವರದಲ್ಲಿ ಹೇಳಿದ. "ಅದನ್ನು ತಿಳಿದುಕೊಂಡೇ ನಾನು ಮಾತಾಡುತ್ತಿರುವೆನು. ಅದನ್ನು ನನಗಿಂತಲೂ ಹೆಚ್ಚಾಗಿ ನೀನೇ ಅರಿತಿರಬೇಕು. ನೀನು ನನ್ನ ಹಿರಿಯಣ್ಣ; ತಮ್ಮನನ್ನು ಜೀತದಾಳಿಗಿಂತಲೂ ಕೀಳಾಗಿ ಕಾಣುತ್ತಿರುವ ನನ್ನ ಹಿರಿಯಣ್ಣ! ನಿನ್ನಂತಹ ಇಪ್ಪತ್ತುಮಂದಿ ಸೋದರರು ನನಗಿದ್ದರೂ, ನನ್ನ ಧಮನಿಗಳಲ್ಲಿ ಹರಿವ ರಕ್ತದ ಬಣ್ಣ ಬದಲಾಗದು. ನಿನ್ನ ಮೈಯಲ್ಲಿ ಹರಿಯುವಂತೆ ನನ್ನ ದೇಹದಲ್ಲಿಯೂ ಮಾಲೂರು ರಾಚಯ್ಯನ ನೆತ್ತರೇ ಹರಿಯುವುದು."

"ಲೋ ಪೋರ, ನನಗೆ ಬೇರೆ ಕೆಲಸವಿದೆ. ನಿನ್ನ ತಲೆಹರಟೆ ಕೇಳಲು ನನಗೆ ಸಮಯವಿಲ್ಲ." ದಾರಿಗೆ ಅಡ್ಡನಿಂತ ಅಪ್ಪಾಜಿಯನ್ನು ಎಡಗೈಯಿಂದ ದೂಡುತ್ತಾ ಓಬಲ ನುಡಿದ.

"ಅಣ್ಣ, ಈ ವಿದ್ಯೆಯಲ್ಲಿ ನೀನು ಪಳಗಿದವನಲ್ಲ. ನೀನು ಹೇಡಿಗಾಯಿ!" ಅಪ್ಪಾಜಿ ತನ್ನ ಬಲಗೈಯನ್ನು ಅಣ್ಣನ ಕೊರಳಿಗೆ ಹಾಕಿ ಕೊರಳನ್ನು ಒತ್ತಿ ಹಿಡಿದ.

"ಎಲಾ ಕುನ್ನಿ! ನಿನ್ನ ಅಣ್ಣನ ಮೇಲೆ ಕೈಮಾಡುತ್ತಿರುವೆಯಾ. ನೀಚ, ದುರಾತ್ಮ!" ಓಬಲ ತಮ್ಮನ ಹಿಡಿತದಿಂದ ಕೊರಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾ ಕೋಪದಿಂದ ಒದರಿದ.

"ನಾನೇನೂ ನೀಚನಲ್ಲ!" ಅಪ್ಪಾಜಿ ಅಣ್ಣನ ಕೊರಳಿಂದ ಕೈಯನ್ನು ತೆಗೆಯಲಿಲ್ಲ. ಅವನ ಕಣ್ಣುಗಳು ಮುನಿಸಿನಿಂದ ಕಾದ ಕೆಂಡಗಳಾದುವು. "ನಾನು ಮಾಲೂರು ರಾಚಯ್ಯನ ಕನಿಷ್ಠ ಪುತ್ರ. ಯಾವಾತ ಮಾಲೂರು ರಾಚಯ್ಯ ದುರಾತ್ಮನಾದ ಪುತ್ರನನ್ನು ಪಡೆದನೆಂದು ಹೇಳಿದನೋ ಆತ ನೀಚ. ನೀನು ನನ್ನ ಸೋದರನಾಗಿರದಿದ್ದರೆ, ನನ್ನ ಇನ್ನೊಂದು ಕೈ ಕೆಡುನುಡಿದ ನಿನ್ನ ನಾಲಗೆಯನ್ನು ಕಿತ್ತುಹಾಕದೆ ಇರುತ್ತಿರಲಿಲ್ಲ!"

ಸೋದರರ ಕಲಹವನ್ನು ಕಂಡ ನರಸಜ್ಜ ಅನಿತರಲ್ಲಿ ಅಲ್ಲಿಗೆ ಓಡಿಬಂದ. ಅವನು ಅಣ್ಣತಮ್ಮಂದಿರ ನಡುವೆ ನುಗ್ಗಿ "ಧನಿಗಳೇ, ಸ್ವರ್ಗವಾಸಿಗಳಾದ ನಿಮ್ಮ ತಂದೆಯನ್ನು ಸ್ಮರಿಸಿಯಾದರೂ ಹೊಡೆದಾಡಬೇಡಿರಿ" ಎಂದು ತಡೆದ.

"ಬಿಡು ನಾನು ಹೋಗುವೆನು". ಓಬಲ ತಮ್ಮನ ಹಿಡಿತದಿಂದ ಕೊರಳನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿದ.

"ಇಲ್ಲ. ಈಗ ನಿನ್ನನ್ನು ಬಿಡಲಾರೆ. ನಾನು ಹೇಳುವುದನ್ನೆಲ್ಲಾ ನೀನು ಕಿವಿಗೊಟ್ಟು ಕೇಳಲೇಬೇಕು". ಅಪ್ಪಾಜಿ ತನ್ನ ಮುಷ್ಟಿಯನ್ನು ಬಿಗಿಮಾಡಿದ. "ಅಪ್ಪ ಸಾಯುವಾಗ ನನಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಸಭ್ಯನನ್ನಾಗಿ ಮಾಡಬೇಕೆಂಬ ಹೊಣೆಯನ್ನು ನಿನಗೆ ಒಪ್ಪಿಸಿದ. ಆದರೆ ನೀನು ನನಗೆ ಯೋಗ್ಯ ವಿದ್ಯಾಬುದ್ಧಿಗಳನ್ನು ಕಲಿಸದೆ ಉಪೇಕ್ಷೆಮಾಡಿದೆ. ನನ್ನನ್ನು ಹಳ್ಳಿಯ ಗಾಂಪನಂತೆ ನಡೆಸಿಕೊಂಡೆ. ಸಭ್ಯೋಚಿತ ಸಂಪ್ರದಾಯದ ರೀತಿ ನೀತಿಗಳನ್ನು ನನ್ನ ದೃಷ್ಟಿಯಿಂದ ಮರೆಯಾಗಿರಿಸಿದೆ. ಆದರೆ ನನ್ನ ಧಮನಿಗಳಲ್ಲಿ ಹರಿಯುತ್ತಿರುವ ತಂದೆಯ ನೆತ್ತರು ಈ ತಿರಸ್ಕಾರ ಅಪಮಾನಗಳನ್ನು ಪ್ರತಿಭಟಿಸೆಂದು ಹೇಳುತ್ತಲಿದೆ. ಕುಲೀನ ಕುಟುಂಬದ ಗೃಹಸ್ಥರಿಗೆ ಉಚಿತವಾದ ಆಟಕೂಟ ವಿನೋದಗಳಲ್ಲಿ ಭಾಗವಹಿಸಲು ನನಗೆ ಅವಕಾಶವೊದಗಿಸು. ಅಲ್ಲದಿದ್ದರೆ ನನ್ನ ಪಾಲಿನ ಆಸ್ತಿಯನ್ನು ಕೊಟ್ಟುಬಿಡು. ಆ ಐಶ್ವರ್ಯದಿಂದ ನಾನು ನನ್ನ ಪಾಲಿನ ಭಾಗ್ಯದೇವತೆಯನ್ನು ಅರಸುವೆನು".

"ಆಗಲಿ, ನಿನ್ನ ಪಾಲನ್ನು ನಿನಗೆ ಬಿಟ್ಟುಕೊಡುವೆನು. ಅದನ್ನು ದುಂದುಗಾರಿಕೆಮಾಡಿ ಕಳೆದ ಅನಂತರ ತಿರುಪೆಯೆತ್ತುವೆಯಂತೆ". ಓಬಲ ಮಾರ್ನುಡಿದ. "ನಿನ್ನಿಂದ ಕಷ್ಟಕ್ಕೊಳಗಾಗಲು ನನಗೆ ಇಷ್ಟವಿಲ್ಲ. ನಿನ್ನ ಪಾಲನ್ನು ಕೊಟ್ಟುಬಿಡುವೆನು. ನೀನು ಹಾಳಾಗಿ ಹೋಗು!"

"ಸರಿ. ಅಗತ್ಯವಾದುದಕ್ಕಿಂತ ಹೆಚ್ಚು ತೊಂದರೆಯನ್ನು ನಾನು ನಿನಗೆ ಕೊಡಲಾರೆ. ನನ್ನ ಪಾಲಿನ ಆಸ್ತಿಯನ್ನು ಕೊಟ್ಟುಬಿಡು. ನಾನು ಬೇರೆಯಾಗಿ ಇರುವೆನು. ನಿನ್ನೊಡನೆ ಯಾವ ಕಲಹಕ್ಕೂ ಬರುವುದಿಲ್ಲ."

ಎಂದು ನುಡಿದ ಅಪ್ಪಾಜಿ ಅಣ್ಣನ ಗಂಟಲನ್ನು ಒತ್ತಿಹಿಡಿದ ತನ್ನ ಕೈಯನ್ನು ತೆಗೆದ. ಓಬಲ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಾ ಮಂದಿರದ ಹಾದಿಯನ್ನು ಹಿಡಿದ.

## ಏಳು

ಮೇಲೆ ವಿವರಿಸಿದ ಘಟನೆ ಓಬಲನ ಮೇಲೆ ವಿಶೇಷ ಪರಿಣಾಮವನ್ನು ಎಸಗಿತು. ಈತನಕ ಅವನು ಅಪ್ಪಾಜಿಯನ್ನು ಜೀತದಾಳಿಗಿಂತಲೂ ನಿಕೃಷ್ಟ ವಾಗಿ ನಡೆಸಿಕೊಂಡಿದ್ದ. ಅವನ ಯೋಗಕ್ಷೇಮಗಳನ್ನು ದುರ್ಲಕ್ಷಿಸಿದ್ದ. ಇನ್ನು ಮುಂದೆಯೂ ತಮ್ಮನನ್ನು ಅದೇ ರೀತಿ ನಡೆಸಿಕೊಳ್ಳಬಹುದೆಂದು ಅವನ ಕಲ್ಪನೆಯಾಗಿದ್ದಿತು. ಆದರೆ ಅಪ್ಪಾಜಿಯ ಪ್ರತಿಭಟನೆ ಓಬಲನ ಸಂಕಲ್ಪ ಸೌಧಕ್ಕೆ ಒಂದು ದೊಡ್ಡ ಆಘಾತವಾಗಿ ಪರಿಣಮಿಸಿತು.

ಇನ್ನು ಮುಂದೆ ಅಪ್ಪಾಜಿ ತನ್ನ ನಿಂದೆ ತಿರಸ್ಕಾರಗಳನ್ನು ಮೌನವಾಗಿ ಸಹಿಸುವಂತಿಲ್ಲ. ಅವನ ನುಡಿಗೆ ತಾನು ಸಮ್ಮತಿಸದಿದ್ದರೆ, ಅವನು ತನ್ನ ನೆತ್ತಿಯಮೇಲೆ ಮಣಸರೆಯತೊಡಗುವನು ಎಂಬುದು ಓಬಲನಿಗೆ ಅನುಭವ ವೇದ್ಯವಾಗತೊಡಗಿತು. ಅವನು ತನಗಿಂತಲೂ ಶಕ್ತಿಶಾಲಿಯಾದುದರಿಂದ, ಅವನೊಡನೆ ಕಲಹಿಸಿ ತಾನು ಜಯವನ್ನು ಗಳಿಸುವಂತಿಲ್ಲ. ಅವನಿಗೆ ಜನರ ಬೆಂಬಲ ಬೇರೆ ದೊರಕಬಹುದು. ಅಪ್ಪಾಜಿಗೆ ತಾನು ಮಾತುಕೊಟ್ಟಂತೆ ತಂದೆಯ ಆಸ್ತಿಯಲ್ಲಿ ಪಾಲುಕೊಡಲು ಓಬಲನ ಮನ ಒಪ್ಪದಾಯಿತು. ಈ ತುಂಟ ಪೋರನಿಗೆ ತಂದೆಯ ಜಹಗೀರಿಯಲ್ಲಿ ಏಕೆ ಪಾಲುಕೊಡಬೇಕು? ಪಾಲುಕೊಟ್ಟರೆ ತನ್ನ ಸಂಪತ್ತು ಅಷ್ಟು ಕಡಿಮೆಯಾಗುವುದಲ್ಲ ಎಂದು ಅವನು ಆಲೋಚಿಸತೊಡಗಿದ.

ಓಬಲನಿಗೆ ಅಪ್ಪಾಜಿ ತನ್ನ ಹಾಸಿಗೆಯಲ್ಲಿ ಸೇರಿಕೊಂಡ ಒಂದು ಮುಳ್ಳಿನಂತೆ ತೋರಿದ. ಯಾವ ಉಪಾಯದಿಂದಲಾದರೂ ಈ ಮುಳ್ಳನ್ನು ಹೆಕ್ಕಿತೆಗೆದು ಸುಟ್ಟುಹಾಕಬೇಕು. ತಮ್ಮನಿಗೆ ಪಾಲುಕೊಡದೆ ಅವನ ಆಸ್ತಿ ಯನ್ನು ನುಂಗಿ ನೀರುಕುಡಿಯಲು ಇರುವ ಉಪಾಯವೇನೆಂದು ಅವನ ಬುದ್ಧಿ ಮೆಲುಕುಹಾಕತೊಡಗಿತು.

ಓಬಲನು ಹೀಗೆ ಚಿಂತಾಕ್ರಾಂತನಾಗಿದ್ದಾಗ ಸೇವಕನೊಬ್ಬನು ಬಂದು, "ರಾಜಾಸ್ಥಾನದ ಜಟ್ಟಿ ಚೆಲುವಯ್ಯ ತಮ್ಮ ದರ್ಶನಕ್ಕೆ ಸಮಯ ಕಾಯು ತ್ತಿರುವನು" ಎಂಬ ವಾರ್ತೆಯನ್ನು ಅರುಹಿದ.

"ಹೋಗು, ಅವನನ್ನು ಸನ್ನಿಧಾನಕ್ಕೆ ಬರಹೇಳು." ಎಂದು ಓಬಲ ಸೇವಕನಿಗೆ ಆಜ್ಞಾಪಿಸಿದ.

ಚೆಲುವಯ್ಯ ಜಹಗೀರದಾರನ ಸನ್ನಿಧಿಗೆ ಆಗಮಿಸಿದ. ಓಬಲನಿಗೆ ವಂದಿಸಿ ಉಚಿತಾಸನದಲ್ಲಿ ಮಂಡಿಸಿದ. ಮೊದಲು ದೊರೆಯ ಯೋಗಕ್ಷೇಮವನ್ನು ಕುರಿತುಳ್ಳ ಮಾತುಕತೆಗಳಾದುವು. ಕೊನೆಗೆ ಓಬಲ, "ಚೆಲುವಯ್ಯ, ನಾಳೆ ಆಸ್ಥಾನದಲ್ಲಿ ಮಲ್ಲಯುದ್ಧ ಜರಗುವುದೆಂದು ಕೇಳಿದೆನಲ್ಲ, ಅದು ನಿಜವೇ?" ಎಂದು ಜಟ್ಟಿಯನ್ನು ಪ್ರಶ್ನಿಸಿದ.

"ಹೌದು, ಆ ವಿಷಯವನ್ನು ಕುರಿತು ಪ್ರಸ್ತಾವಿಸಲೆಂದೇ ತಮ್ಮ ಸನ್ನಿಧಾನಕ್ಕೆ ಬಂದೆ."

"ನನಗೂ ಈ ಜಟ್ಟಿಕಾಳಗಕ್ಕೂ ಯಾವ ಸಂಬಂಧವೂ ಇಲ್ಲವಲ್ಲ. ನನ್ನ ಕಡೆಯುವರು ಯಾರೂ ಈ ಮಲ್ಲಯುದ್ಧದಲ್ಲಿ ಭಾಗವಹಿಸುವುದಿಲ್ಲ."

"ತಮಗೆ ತಿಳಿಯದು, ತಮಗೆ ಬೇಕಾದವರೊಬ್ಬರು ಈ ಜಟ್ಟಿಕಾಳಗದಲ್ಲಿ ಸೇರಲು ನಿರ್ಧರಿಸಿದ್ದಾರೆ."

"ಯಾರದು? ಆತನ ಹೆಸರೇನು?" ಓಬಲ ಉತ್ಸುಕತೆಯಿಂದ ಪ್ರಶ್ನಿಸಿದ.

"ಈ ಸಂಗತಿ ತಮಗೆ ತಿಳಿಯದೇ?" ಚೆಲುವಯ್ಯನ ಕಣ್ಣುಗಳಲ್ಲಿ ವಿಸ್ಮಯದ ಕಿಡಿಗಳು ತೇಲಿದುವು." ನಾಳೆ ನಿಮ್ಮ ಸೋದರ ಅಪ್ಪಾಜಿ ಪ್ರಚ್ಛನ್ನವೇಷದಲ್ಲಿ ಮಲ್ಲಯುದ್ಧದಲ್ಲಿ ಭಾಗವಹಿಸಲು ಉದ್ಯುಕ್ತರಾಗಿರುವರೆಂಬುದು ನಿನ್ನೆ ನನಗೆ ತಿಳಿಯಿತು. ಈ ವಾರ್ತೆ ತಮಗೆ ಅರಿವಾಗದುದು ಸೋಜಿಗ!"

"ಆ ತಮ್ಮರಾಯ ತಿಳಿಸಿದರಲ್ಲವೇ ನಾನರಿವುದು. ಅವನು ನನ್ನನ್ನು ಹಗೆಯೆಂದೆಣಿಸಿದ್ದಾನೆ. ಅವನು ಯಾವ ಸಮಾಚಾರವನ್ನೂ ನನಗೆ ಅರುಹುವುದಿಲ್ಲ."

"ನಾಳೆ ದಿನದ ಮಲ್ಲಯುದ್ಧದಲ್ಲಿ ನನ್ನ ಕೀರ್ತಿ ಪ್ರಶಸ್ತಿಗಳಿಗೋಸ್ಕರ ನಾನು ಕಾದುವೆನು." ಜಟ್ಟಿ ಮಾತು ಮುಂದರಿಸಿದ. "ನಾಳೆ ದಿನದ ಹೋಣರಿಕೆಯಲ್ಲಿ ಯಾವಾತ ತನ್ನ ಕೈಕಾಲುಗಳನ್ನು ಮುರಿದುಕೊಳ್ಳದೆ ಪಾರಾಗುವನೋ, ಅವನು ಭಾಗ್ಯಶಾಲಿಯೇ ಸರಿ. ತಮ್ಮ ಸೋದರನ ಪ್ರಾಯ ಇನ್ನೂ ಎಳೆಯದು. ಮಲ್ಲಯುದ್ಧದ ಕೌಶಲಗಳನ್ನೆಲ್ಲಾ ಪೂರ್ಣವಾಗಿ ಅಳವಡಿಸಿಕೊಂಡಿರಲಾರ. ಅವನೊಡನೆ ಹೋಣರಲು ನಾನು ಬಯಸುವುದಿಲ್ಲ. ತಮ್ಮಲ್ಲಿ ನನಗಿರುವ ವಿಶ್ವಾಸದ ನಿಮಿತ್ತ ನಾನು ಈ ಸಮಾಚಾರವನ್ನು ಅರುಹಲು ಇಲ್ಲಿಗೆ ಬಂದೆ. ಅವನು ಮಲ್ಲ ಕಣಕ್ಕೆ ಇಳಿದರೆ, ನಾನು ಆತನ ಸಂಗಡ ಕಾದಲೇ ಬೇಕಾಗುವುದು. ಆದುದರಿಂದ ಆತನು ಮಲ್ಲ ಯುದ್ಧಕ್ಕೆ

ಇಳಿಯಬೇಕೆಂಬ ಉದ್ದೇಶದಿಂದ ವಿಮುಖನಾಗುವಂತೆ ತಾವು ಪ್ರೇರಿಸಬೇಕು. ಹಾಗಲ್ಲದೆ ಆತ ಹೋಣರಿಯೇ ತೀರುವೆನೆಂದು ಪಟಹಿಡಿದರೆ,—ಕಾಳಗದಲ್ಲಿ ಆತನಿಗೆ ಏನಾದರೂ ಅಪಾಯ ಒದಗಿದರೆ ತಾವು ನನ್ನ ವಿಷಯದಲ್ಲಿ ತಪ್ಪು ಅಭಿಪ್ರಾಯವನ್ನು ಗ್ರಹಿಸಬಾರದು ಎಂಬುದೇ ನನ್ನ ಕೋರಿಕೆ!"

ಚೆಲುವಯ್ಯನ ನುಡಿಗಳನ್ನು ಕೇಳಿದಾಗ ಓಬಲನ ಕೆನ್ನೆಗಳ ಮೇಲೆ ಗೆಲುವಿನ ಕದಿರುಗಳು ಮಿನುಗಿದುವು. ಕಾಡಿನಲ್ಲಿ ತಾನು ಅರಸುತ್ತಿರುವ ಬಳ್ಳಿ ತಾನಾಗಿಯೇ ಕಾಲಿಗೆ ತೊಡಕಿದಂತಾಯಿತು. ಅವನು ತನ್ನ ದಾರಿಯಲ್ಲಿ ಮುಳ್ಳಿನಂತಿರುವ ಅಪ್ಪಾಜಿಯನ್ನು ಕಿತ್ತು ಒಗೆಯುವುದು ಹೇಗೆಂದು ಈತನಕ ಆಲೋಚಿಸುತ್ತಿದ್ದ. ಈಗ ಈ ಸಮಸ್ಯೆಯನ್ನು ಬಗೆಹರಿಸಲು ಒಂದು ಸುಲಭೋಪಾಯ ದೊರೆತಂತಾಯಿತು. ತನಗೆ ಯಾವ ಶ್ರಮವೂ ಇಲ್ಲದೆ ಕಂಟಕಪ್ರಾಯನಾದ ಅಪ್ಪಾಜಿಯನ್ನು ನಿವಾರಿಸುವ ಹಾದಿ ಪ್ರಾಪ್ತವಾದಂತಾಯಿತು. ತಾನು ಭಾಗ್ಯಶಾಲಿ, ದೈವ ತನಗೊಲಿದಿದೆ ಎಂದು ಅವನು ಹಿಗ್ಗಿದ.

ಚೆಲುವಯ್ಯ ಬಲಾಢ್ಯನಾದ ಮಲ್ಲ. ಅನೇಕ ಮಂದಿ ಬಲಶಾಲಿ ಮಲ್ಲರನ್ನು ಸದೆಬಡಿದು ತಾನು ಅಜೇಯನೆಂಬ ಖ್ಯಾತಿ ಗಳಿಸಿದ್ದಾನೆ. ಅವನೊಡನೆ ಸೆಣಸಿ ಗೆಲುವು ಪಡೆಯಬಲ್ಲ ಕಲಿಗಳು ಚೆಂಗಾಳ್ವರ ನಾಡಿನಲ್ಲಿಲ್ಲ. ಈಗ ಅಪ್ಪಾಜಿ ಈ ಜಗಜಟ್ಟಿಯೊಡನೆ ಹೋಣರಲು ತಾನಾಗಿಯೇ ಹೊರಟಿದ್ದಾನೆ. ತಮ್ಮ ಈ ಮಹಾ ಮಲ್ಲನೊಡನೆ ಹೋರಲಿ; ಕೊನೆಗೆ ಪೆಟ್ಟುತಿಂದು ಮಣ್ಣು ಮುಕ್ಕಲಿ! ಅವನ ಧಿಕ್ಕಾರಕ್ಕೆ ತಕ್ಕ ಶಾಸ್ತಿಯಾಯಿತು! ತನ್ನ ಮಾರ್ಗದಲ್ಲಿರುವ ಒಂದು ಕಂಟಕ ಪರಿಹಾರವಾಯಿತು; ದೈವವೇ ಈ ದಾರಿಯನ್ನು ತೋರಿಸಿ ತನಗೆ ಸಹಾಯವೆಸಗಿದೆ!

ಹೀಗೆ ಆಲೋಚನಾತರಂಗಗಳು ಒಂದೊಂದಾಗಿ ಓಬಲನ ಚಿತ್ತದಲ್ಲಿ ಸುಳಿದುವು. ಅವನು ಚೆಲುವಯ್ಯನ ಚಿತ್ತದಲ್ಲಿ ಪ್ರತೀಕಾರದ ಬೀಜವನ್ನು ಬಿತ್ತುವುದು ಹೇಗೆ ಎಂದು ಚಿಂತಿಸಿದ. "ನೀನು ಉಪಾಯದಿಂದ ಚೆಲುವಯ್ಯ ಅಪ್ಪಾಜಿಯ ಮೇಲೆ ದ್ವೇಶತಾಳುವಂತೆ ಮಾಡಬೇಕು. ಹಾಗಾದರೆ ನಿನ್ನ ಕಾರ್ಯಸಾಧನೆಯಾಗುವುದು" ಎಂದು ಅವನ ಕುಟಿಲಬುದ್ಧಿ ಹೇಳಿತು.

"ಚೆಲುವಯ್ಯ, ನೀನು ಈ ಸುದ್ದಿಯನ್ನು ಅರುಹಿದುದಕ್ಕೆ ನಾನು ನಿನಗೆ ಕೃತಜ್ಞ. ಅದಕ್ಕೆ ಪ್ರತಿಯಾಗಿ ನಿನಗೆ ನಾನು ಲೇಸನ್ನು ಬಯಸದೆ ಇರಲಾರೆ". ಓಬಲನು ತನ್ನ ಅಂತರಂಗದಲ್ಲಿ ಹೆಡೆಯಾಡಿಸುತ್ತಿರುವ ಕುಹಕತನವನ್ನು

ಹೊರಗೆ ತೋರಗೊಡದೆ ಸೌಮ್ಯ ವಾಣಿಯಲ್ಲಿ ಹೇಳಿದ. "ನಾಳೆ ದಿನದ ಮಲ್ಲ ಯುದ್ಧದಲ್ಲಿ ಭಾಗವಹಿಸಬೇಕೆಂದು ನನ್ನ ಸೋದರನು ಮಾಡಿದ ನಿರ್ಧಾರ ನನಗೆ ಬೇರೆಕಡೆಯಿಂದಲೂ ತಿಳಿಯಬಂತು. ಪ್ರಾಣಾಪಾಯಕಾರಕವಾದ ಈ ಮಲ್ಲಯುದ್ಧದಿಂದ ಹಿಂದೆಗೆಯಬೇಕೆಂದು ಅವನ ಗೆಳೆಯರ ಮೂಲಕ ಪ್ರೇರಿಸಿದೆ. ಆದರೆ ಅವನು ಈ ಸಂಗತಿಯಲ್ಲಿ ಬಂಡೆಗಲ್ಲಿನಂತೆ ಸ್ಥಿರನಾಗಿದ್ದಾನೆ. ನಾನು ಹೇಳಿದರೆ ಮತ್ಸರದಿಂದ ಆಡುತ್ತಿರುವೆನೆಂದು ನೀನು ಭಾವಿಸಬಹುದು. ಆದುದರಿಂದ ನಾನು ತಮ್ಮನ ವಿಷಯ ಮಾತಾಡದಿರುವುದು ಲೇಸು".

"ಏಕೆ?—ನಾನೇನೂ ತಮ್ಮ ವಿಷಯದಲ್ಲಿ ತಪ್ಪು ಗ್ರಹಿಸಲಾರೆ. ಕೆಲವು ಸಲ ನಮ್ಮೊಡನೆ ಹೋಣರುವ ಪ್ರತಿಸ್ಪರ್ಧಿಗಳ ಪೂರ್ವ ಚರಿತ್ರೆಗಳನ್ನು ಅರಿತಿರುವುದು ಪ್ರಯೋಜನಕರವಾಗುವುದು. ಜಟ್ಟಿಗಳಲ್ಲಿ ಕೆಲವರು ದುಷ್ಟರೂ, ಪ್ರಜಾಕಂಟಕರೂ ಆಗಿರುತ್ತಾರೆ. ಅಂತಹರನ್ನು ಮಲ್ಲಯುದ್ಧದಲ್ಲಿ ಸದೆಬಡಿಯುವುದರಿಂದ ಪ್ರಜೆಗಳಿಗೆ ಒಂದು ಉಪಕಾರವನ್ನು ಮಾಡಿದಂತಾಗುವುದು."

"ಚೆಲುವಯ್ಯ, ಅಪ್ಪಾಜಿ ಎಷ್ಟಾದರೂ ನನ್ನ ತಮ್ಮ. ಆದರೆ ಅವನ ಗುಣನಡತೆಗಳ ವಿಚಾರ ಮಾತಾಡಲು ನನಗೆ ನಾಚಿಕೆಯಾಗುವುದು. ಅವನಿಗೆ ವಿರೋಧವಾದ ಮಾತುಗಳನ್ನು ನಾನು ಆಡಿದರೆ, ತಮ್ಮನ ಮೇಲಿನ ಅಸೂಯೆಯಿಂದ ಹೇಳುತ್ತಿರುವೆನೆಂದು ಜನರು ಆಡಿಕೊಳ್ಳುವರು. ಆದುದರಿಂದ ಅವನ ವಿಚಾರದಲ್ಲಿ ನಾನು ಈ ತನಕ ತುಟಿ ತೆರೆದಿಲ್ಲ. ನೀನು ತಪ್ಪು ಗ್ರಹಿಸಲಾರೆ ಯೆಂಬುದನ್ನು ನಾನು ಬಲ್ಲೆ. ಆದುದರಿಂದ ನಾನು ಮನಬಿಚ್ಚಿ ಮಾತಾಡುವೆನು. ಇಡೀ ಕನ್ನಡನಾಡಿನಲ್ಲಿ ಅಪ್ಪಾಜಿಯಂತಹ ದುಷ್ಟನೂ ಹಟಮಾರಿಯೂ ಇರಲಾರ. ಅವನು ಅತಿಕಾಂಕ್ಷಿ, ಪ್ರತಿಯೊಬ್ಬರಲ್ಲಿ ಕಾಣುವ ಉತ್ತಮ ಗುಣಗಳನ್ನು ನೋಡಿ ಕರುಬುವ ಬುದ್ಧಿ ಆತನದು. ತನ್ನ ಅಣ್ಣನಿಗೇ ರಹಸ್ಯವಾಗಿ ಕೇಡು ಬಗೆವ ನೀಚಬುದ್ಧಿಯ ದ್ರೋಹಿ ಆತ. ಆದುದರಿಂದ ನೀನು ನಿನ್ನ ವಿವೇಕವನ್ನು ಉಪಯೋಗಿಸು. ಕೋಳಿಯ ಕೊರಳನ್ನು ಮುರಿಯುವಂತೆ ನೀನು ಅವನ ಕೊರಳನ್ನು ಮುರಿದರೆ ನನಗೆ ಸಂತೋಷವೇ ಸರಿ. ನೀನು ಮುಂಜಾಗ್ರತೆಯನ್ನು ವಹಿಸುವುದು ಒಳ್ಳೆಯದು. ನಿನ್ನಿಂದ ಅವನಿಗೇನಾದರೂ ಎಳ್ಳಷ್ಟು ಅಪಮಾನವಾಗಿ, ಜೀವಂತ ಉಳಿದರೆ,- ಅವನು ಸೇಡನ್ನು ತೀರಿಸಿಕೊಳ್ಳಲು ಎಂದೂ ಮರೆಯಲಾರ. ವಿಷಪ್ರಯೋಗ ಅಥವಾ ಜೇರಿನಾವುದಾದರೂ ವಕ್ರ ಮಾರ್ಗವನ್ನು ಕೈಗೊಳ್ಳಲು ಹಿಂಜರಿಯದ ನೀಚಬುದ್ಧಿ

ಆತನದು. ಈ ಸಂಗತಿಗಳನ್ನು ಹೇಳಲು ನನಗೆ ನಾಚಿಕೆಯಾಗುತ್ತಿದೆ; ದುಃಖದಿಂದ ಕೊರಳು ಬಿಗಿಯುತ್ತಿದೆ; ಕಣ್ಣುಗಳಲ್ಲಿ ನೀರು ತುಂಬುತ್ತಿದೆ. ಈ ತಮ್ಮರಾಯ ತಂದೆಯ ಧವಲಕೀರ್ತಿಗೆ ಕಲಂಕವನ್ನು ತರುತ್ತಿದ್ದಾನೆ!"

"ನಾನು ತಮ್ಮ ಸನ್ನಿಧಿಗೆ ಬಂದುದು ಲೇಸಾಯಿತು. ತಮ್ಮ ಸಲಹೆಯನ್ನು ಮರೆಯೆ". ಜಟ್ಟಿ ಮಾರ್ನುಡಿದ. "ನಾಳೆದಿನ ಮಲ್ಲಕಣದಲ್ಲಿ ಅವನು ನನಗೆ ಇದಿರಾಗಲಿ. ಅವನ ದೌರ್ಜನ್ಯಕ್ಕೆ ತಕ್ಕ ಬೆಲೆಯನ್ನು ಕಕ್ಕಿಸುವೆನು. ಅವನು ಯಾವ ಅಪಾಯಕ್ಕೂ ಒಳಗಾಗದೆ ಕಣದಿಂದ ಹೊರಬಂದನಾದರೆ, ಇನ್ನುಮುಂದೆ ಮಲ್ಲಯುದ್ಧ ಹಿಡಿವ ನನ್ನ ಕುಲವೃತ್ತಿಗೆ ಎಳ್ಳುನೀರು ಬಿಡುವೆನು."

ಎಂದು ಹೇಳಿದ ಚೆಲುವಯ್ಯ ಓಬಲನಿಗೆ ವಂದಿಸಿ, ಅವನನ್ನು ಬೀಳ್ಕೊಂಡ. ಆಸ್ಥಾನದ ಮಲ್ಲ ಚೆಲುವಯ್ಯ ತಾನು ಹರಡಿದ ಬಲೆಗೆ ಬಿದ್ದ ಹರಿಣವಾದುದನ್ನು ಕಂಡು ಓಬಲ ಅಂತರಂಗದಲ್ಲಿ ಹಿರಿಹಿಗ್ಗಿದ. ಅಪ್ಪಾಜಿಯನ್ನು ತಾನು ಇನ್ನು ನಿರ್ಮೂಲಗೊಳಿಸಿದಂತೆಯೇ ಎಂದು ಅವನು ಭಾವಿಸಿದ.

"ಹೂಂ, ಅಪ್ಪಾಜಿ, ನನ್ನ ಕೊರಳಿಗೆ ಕೈಹಾಕಿ ನನಗೆ ಬುದ್ಧಿಗಲಿಸಲು ನೀನು ಬಂದೆಯಲ್ಲ; ತಂದೆಯ ಆಸ್ತಿಯಲ್ಲಿ ಪಾಲುಕೊಡಬೇಕೆಂದು ಕೇಳಿದೆಯಲ್ಲ?" ಓಬಲ ತನ್ನ ಕೋಣೆಯಲ್ಲಿ ಅಡ್ಡಾಡುತ್ತಾ ಉದ್ಗಾರವೆತ್ತಿದ. "ಈಗ ಪಡೆದುಕೋ ಆಸ್ತಿಯಲ್ಲಿ ಪಾಲನ್ನು; ಚೆಲುವಯ್ಯ ಕೊಡುತ್ತಾನೆ ನಿನ್ನ ಪಾಲಿಗೆ ಸೇರಿದ ಸಾವನ್ನು!"

---

## ಎಂಟು

ಜಟ್ಟಿ ಕಾಳಗದಲ್ಲಿ ಓಬಲನ ನಿರೀಕ್ಷೆಯಂತೆ ಅಪ್ಪಾಜಿ ಸೋತು ಸಾವನ್ನು ಅಪ್ಪಲಿಲ್ಲ. ಅವನು ಮಹಾಮಲ್ಲ ಚೆಲುವಯ್ಯನನ್ನು ಸದೆದು ಜೇತಾರನಾಗಿ ಸ್ವಗೃಹಕ್ಕೆ ಮರಳಿದ. ಅಪ್ಪಾಜಿ ಊರಿಗೆ ತಲಪುವ ಮುನ್ನ ಅವನು ಪಡೆದ ವಿಜಯವಾರ್ತೆ ಬಿರುಗಾಳಿಯಂತೆ ತೀವ್ರವಾಗಿ ಪಯಣಗೈದು ಊರಿನಲ್ಲಿ ಪಸರಿಸಿತ್ತು. ಊರಜನ ಅವನ ಕದನಕೌಶಲವನ್ನು ಕಲಿತನವನ್ನು ಹಾಡಿ

ಹೊಗಳಿದರು; ಮಡಿದ ರಾಚಯ್ಯನ ಹೆಸರನ್ನು ಶಾಶ್ವತಗೊಳಿಸಲು ಜನಿಸಿದ ವೀರಪುತ್ರನೀತನೆಂದು ಪ್ರಶಂಸಿಸಿದರು. ಜನರ ಈ ಪ್ರಶಂಸಾ ವಚನಗಳು ಓಬಲನ ಕಿವಿಗಳಿಗೆ ಚುಚ್ಚುವ ಕೂರಲಗುಗಳಾದುವು. ಅಪ್ಪಾಜಿಯ ಹೊಗಳಿಕೆ ತನ್ನ ತೆಗಳಿಕೆಯೇ ಸರಿ ಎಂದು ಅವನ ವಕ್ರಬುದ್ಧಿ ಆಲೋಚಿಸಿತು.

ಓಬಲನ ಚಿತ್ತ ಮಾತ್ಸರ್ಯವಿದ್ವೇಷಗಳ ಲೀಲಾರಂಗವೆನಿಸಿತು. ಮಲ್ಲಯುದ್ಧದಲ್ಲಿ ಅಪ್ಪಾಜಿ ಪಡೆದ ಗೆಲುವು ಅವನ ವಿವೇಕವನ್ನು ತೊಡೆದು ಹಾಕಿತು. "ಅಪ್ಪಾಜಿಯನ್ನು ಕೊಲ್ಲಲು ಜಟ್ಟಿ ಚೆಲುವಯ್ಯನಿಗೆ ಅಶಕ್ಯವೆನಿಸಿತು. ಮಹಾಮಲ್ಲನಿಂದ ಆಗದ ಕಾರ್ಯವನ್ನು ನೀನು ಸಾಧಿಸು." ಎಂದು ಅವನ ಕುಟಿಲಮತಿ ಸಲಹೆಯನ್ನು ನೀಡಿತು.

"ಅಪ್ಪಾಜಿ ನಿನ್ನ ಸೋದರ. ನಿಮ್ಮಿರ್ವರಲ್ಲಿಯೂ ರಾಚಯ್ಯನ ಪರಿಶುದ್ಧ ರಕ್ತವೇ ಹರಿಯುತ್ತಿದೆ. ಸೋದರ ಹತ್ಯೆಯನ್ನು ಎಸಗಿ ನಿನ್ನ ಕೈಗಳನ್ನು ಕಲಂಕಗೊಳಿಸುವೆಯಾ?" ಎಂದು ಅವನ ಅಂತರಂಗ ಪ್ರಶ್ನಿಸಿತು.

"ದಯೆ ಮರುಕಗಳಿಂದ ಹಾನಿಯಲ್ಲದೆ ಲಾಭವಿಲ್ಲ. ಅವನ ಪಾಲಿನ ಆಸ್ತಿಯನ್ನು ಬಿಟ್ಟುಕೊಡುವೆಯಾ? ತನ್ನ ಗುಣವಿಶೇಷಗಳಿಂದ ಅಪ್ಪಾಜಿ ಜನಾನುರಾಗಿಯಾಗಿದ್ದಾನೆ. ಸಂಪತ್ತೂ ಕೈಸೇರಿತೆಂದರೆ ಅವನು ಜನಬೆಂಬಲದಿಂದ ನಿನ್ನನ್ನು ಮೂಲೆಗೆ ಒತ್ತುವನು. ಅವನ ಶ್ರೇಯಸ್ಸು-ನಿನ್ನ ಅಧಃಪತನ." ಎಂದು ಬುದ್ಧಿ ಅವನನ್ನು ಎಚ್ಚರಿಸಿತು.

"ಏನುಮಾಡಲಿ? ಕೈಯಾರೆ ಕೊಂದರೆ ಸೋದರಹತ್ಯೆ ಮಾಡಿದೆನೆಂಬ ಅಪವಾದ ಬರುವುದು." ಎಂದು ಓಬಲ ದಿಕ್ಕುತೋಚದೆ ಪ್ರಶ್ನಿಸಿದ.

"ಮಾಡುವ ಮನವೊಂದಿದ್ದರೆ ನೂರಾರು ಉಪಾಯಗಳಿವೆ." ಬುದ್ಧಿ ಹೇಳಿತು.

"ಉಪಾಯವೊಂದನ್ನು ಹೇಳು."

"ಅಪ್ಪಾಜಿ ಮಲಗುವ ಮನೆಗೆ ರಾತ್ರಿ ಕಿಚ್ಚನ್ನಿಕ್ಕಿಬಿಡು. ಅವನು ನಿದ್ರೆ ಮಾಡುತ್ತಿದ್ದಾಗ ಬೆಂದು ಭಸ್ಮವಾಗುವನು. ಅಜಾಗ್ರತೆಯಿಂದ ಕಿಚ್ಚುರಿದು ಬೆಂದುಹೋದನೆಂದು ಜನ ತಿಳಿದುಕೊಳ್ಳುವರು. ನಿನಗೆ ಸೋದರಹತ್ಯೆಯ ಅಪವಾದವೂ ತಪ್ಪುವುದು." ಎಂದು ಬುದ್ಧಿ ಓಬಲನಿಗೆ ದಾರಿಯನ್ನು ತೋರಿಸಿತು.

ಓಬಲ ಆ ಇರುಳು ಅಪ್ಪಾಜಿಯ ಶಯ್ಯಾಗೃಹಕ್ಕೆ ಬೆಂಕಿಯನ್ನಿಕ್ಕಲು

ನಿರ್ಧರಿಸಿದ. ಅವನು ಸೇವಕ ವರ್ಗದಲ್ಲಿ ಆಪ್ತನಾದವನನ್ನು ಹತ್ತಿರಕ್ಕೆ ಕರೆದ. "ನೋಡು, ನನ್ನ ತಮ್ಮ ಮಲಗುವ ಕೋಣೆ ನಿನಗೆ ತಿಳಿದಿದೆಯಲ್ಲವೇ?" ಎಂದು ಅವನು ಆಳನ್ನು ಪ್ರಶ್ನಿಸಿದ.

"ಬಲ್ಲೆ. ನನ್ನೊಡೆಯ."

"ಇಂದು ಇರುಳು ಆತ ಅಲ್ಲಿ ಮಲಗುವನು."

"ಹೂಂ—"

"ಅವನು ರಾಜಧಾನಿಯಿಂದ ನಡೆದು ಬಂದುದರಿಂದ ಬಹಳ ದಣಿದಿರುವನು."

"ಹೌದು ನನ್ನೊಡೆಯ"

"ಆಗ ಅವನಿಗೆ ಬೇಗ ನಿದ್ದೆ ಬರುವುದು"

"ನಿಜ ಸ್ವಾಮಿ—"

"ನೀನು ಯಾರಿಗೂ ತಿಳಿಯದಂತೆ—"

"ಏನು ಮಾಡಬೇಕು ನನ್ನೊಡೆಯ?"

"ನಡು ಇರುಳಿನಲ್ಲಿ—"

"ಸರಿ ಸ್ವಾಮಿ"

"ನನ್ನ ತಮ್ಮ ಮಲಗುವ ಕೋಣೆಗೆ"

"ಹೂಂ" ಎಂದು ಸೇವಕ ತಲೆತಗ್ಗಿಸಿದ.

"ಕಿಚ್ಚನ್ನಿಕ್ಕಿಬಿಡು."

ಸೇವಕ ಮರುಮಾತಾಡದೆ ಸಂದೇಹದೃಷ್ಟಿಯಿಂದ ಧನಿಯ ಮೊಗ ನೋಡಿದ.

"ಈ ಕಾರ್ಯವನ್ನು ನೀನು ಸಾಧಿಸಿದರೆ— ಇಗೋ." ಒಬಲ ಹಿಡಿಯಲ್ಲಿರುವ ಹೊನ್ನನ್ನು ತೋರಿಸಿದ. "ಇದು ಮಾತ್ರವಲ್ಲ. ನೀನು ಇನ್ನು ಮುಂದೆ ಜೀತದಾಳಾಗಿ ದುಡಿಯಬೇಕಾದ ಆವಶ್ಯಕತೆ ಇರದು."

ಒಬಲ ಹಿಡಿಯಲ್ಲಿರುವ ಹೊನ್ನನ್ನು ಆಳಿನ ಕೈಗೆ ಸುರಿದ. ಹೊನ್ನುಗಳ ಮಿರುಗು ಆಳಿನ ಚಿತ್ತವನ್ನು ವಶಪಡಿಸಿಕೊಳ್ಳಲಿರುವ ಗಾಳವಾಯಿತು.

"ಇಂದು ನಡುಯಿರುಳು, ಯಾರಿಗೂ ತಿಳಿಯದಂತೆ— ಕಿಚ್ಚನ್ನಿಕ್ಕುವ ಸಂಗತಿ ಗೋಪ್ಯವಾಗಿರಲಿ".

"ತಮ್ಮ ಅಪ್ಪಣೆಯಂತೆ ನನ್ನೊಡೆಯ.

ಹೊನ್ನಿನ ಪ್ರಲೋಭನಕ್ಕೊಳಗಾದ ಆಳು ಓಬಲನ ಆಜ್ಞೆಯನ್ನು ನೆತ್ತಿಯಲ್ಲಿ ಆಂತ.

ಮುಚ್ಚಿದ ಜಾಳಾಂದ್ರದ ಮರೆಯಲ್ಲಿ ನಿಂತಿದ್ದ ನರಸಜ್ಜ ತಾನು ಆಳಿನೊಡನೆ ನಡೆಸಿದ ಮಾತುಕತೆಗಳನ್ನು ಕಿವಿಗೊಟ್ಟು ಆಲಿಸುತ್ತಿರುವನೆಂಬುದು ಓಬಲನಿಗೆ ಅರಿವಾಗಲಿಲ್ಲ.

ಮಲ್ಲಯುದ್ಧದಲ್ಲಿ ವಿಜಯಪಡೆದ ಅಪ್ಪಾಜಿ ಸ್ವಗೃಹಕ್ಕೆ ಮರಳಿದ. ಅವನು ಮಂದಿರವನ್ನು ಸೇರುವ ಮುನ್ನ,--ದಾರಿಯಲ್ಲಿ ನರಸಜ್ಜ ಇದಿರಾದ. ಆ ವೃದ್ಧ ಸೇವಕನ ಕಣ್ಣುಗಳಲ್ಲಿ ಭಯಶೋಕಗಳು ತೇಲುತ್ತಿದ್ದುವು.

“ನನ್ನ ದೊರೆ, ನೀವು ಅರಸನೋಲಗವನ್ನು ಬಿಟ್ಟು ಈ ಹಾಳುಮಂದಿರಕ್ಕೆ ಏಕೆ ಬಂದಿರಿ?”

“ಏಕೆ ನರಸಜ್ಜ,—ನನ್ನ ಮನೆಗೆ ನಾನು ಬರಬಾರದೇನು?”

“ಇದು ಮನೆಯಲ್ಲ ನನ್ನ ದೊರೆ; ಇದು ಮಸಣ, ನೀವೇಕೆ ಒಳ್ಳೆಯವರಾದಿರಿ?”

“ಒಳ್ಳಿದರೆನಿಸಿಕೊಳ್ಳುವುದು ಅಪರಾಧವೇ ನರಸಜ್ಜ?”

“ಹೌದು ನನ್ನೊಡೆಯ. ಇಂದಿನ ಯುಗದಲ್ಲಿ ಒಳ್ಳೆಯವನೆನಿಸುವುದು ಅಪರಾಧ—ಹಿಂದೆ ಭೀಷ್ಮನೊಬ್ಬ ಸರಳ ಪಾಸಿಗೆಯಲ್ಲಿ ಮಲಗಿದನಂತೆ. ಇಂದು ಬಲ್ಲಿದರೆಲ್ಲರ ಬಾಳು ಅಂಬುಗಳ ಹಾಸಿಗೆಯಾಗಿದೆ!”

“ಏಕೆ ಏನಾಯಿತು ನರಸಜ್ಜ?”

“ನನ್ನ ಕಿರಿದೊರೆ,—ಜನವೆಲ್ಲ ಬಿಚ್ಚುಗೊರಳಿಂದ ಏಕೆ ನಿಮ್ಮನ್ನು ಹೊಗಳುತ್ತಿರುವರು?”

“ಏಕೆಂದು ಹೇಳಲಿ?—ಅವರನ್ನೇ ಕೇಳಬೇಕಷ್ಟೆ.”

“ಆದರೆ ಅವರ ಹೊಗಳಿಕೆಯ ಮಾತು ನಿಮ್ಮ ಎದೆಯನ್ನು ಸೀಳುವ ಕೂರಲಗಾಗಿದೆ ನನ್ನ ದೊರೆ.

“ಏನಾಯಿತು ನರಸಜ್ಜ, ಸ್ವಲ್ಪ ಬಿಡಿಸಿ ಹೇಳು”.

“ನನ್ನ ದೊರೆ, ನಿಮ್ಮ ಗೆಲುವಿನ ವಾರ್ತೆ ಗಾಳಿವೇಗದಲ್ಲಿ ನಿಮಗಿಂತಲೂ ಬೇಗ ಇಲ್ಲಿಗೆ ಬಂದು ತಲುಪಿದೆ. ಕೆಲವು ಮಂದಿ ಸಜ್ಜನರಿಗೆ ಅವರ ಒಳ್ಳೆಯತನವೇ ಹಗೆಯಾಗುವುದು ನನ್ನೊಡೆಯ, ನಿಮ್ಮ ಉತ್ತಮಗುಣಗಳೇ ನಿಮ್ಮ ಜೀವ ತೆಗೆಯಲಿರುವ ದ್ರೋಹಿಗಳಾಗುವುವು! ಇದೆಂತಹ ವಿಚಿತ್ರ ಜಗತ್ತು”

ನರಸಜ್ಜ,-ನಿನಗೆ ಮುದಿತನದ ಮರುಳೇನಾದರೂ ಹಿಡಿಯಿತೇ?" ವೃದ್ಧ ಸೇವಕನ ಮಾತುಗಳು ಹೊಲಬಾಗದಿರಲು, ವಿಸ್ಮಯಾಕುಲನಾದ ಅಪ್ಪಾಜಿ ಪ್ರಶ್ನಿಸಿದ. "ನಿನ್ನ ಮಾತುಗಳು ನನಗೆ ಹೊಲಬಾಗುತ್ತಿಲ್ಲ. ಸ್ವಲ್ಪ ಬಿಡಿಸಿ ವಿಶದವಾಗಿ ಹೇಳು."

"ನನ್ನ ದೊರೆ, ನೀವು ಈ ಮಂದಿರದೊಳಗೆ ನುಗ್ಗದಿರಿ." ನರಸಜ್ಜ ಮನೆಯ ಕಡೆ ಅಡಿಗಳನ್ನಿರಿಸಿದ ಅಪ್ಪಾಜಿಯನ್ನು ತಡೆಯುತ್ತಾ ಹೇಳಿದ. "ಇದು ಮನೆಯಲ್ಲ ಕೃಷ್ಣಸರ್ಪ ವಾಸವಾಗಿರುವ ಹುತ್ತ! ನಿಮ್ಮ ಅಣ್ಣ— ತಮ್ಮನನ್ನೇ ಕೊಲೆಗೈಯಲು ಹೊರಟ ಆ ನೀಚನನ್ನು ಅಣ್ಣನೆಂದು ಹೇಗೆ ಹೇಳಲಿ?-ಅಲ್ಲ, ಹಳೆಯ ದನಿಯ ಮಗ;-ಅದಾಗದು, ಹಳೆಯ ದನಿಯ ಮಗನೆಂದು ಕರೆದರೆ ಸ್ವರ್ಗವಾಸಿಯಾದ ಆ ಪುಣ್ಯಾತ್ಮಗೆ ಅವಮಾನ— ನಿಮ್ಮ ಹಗೆಯು ಎಂದು ಹೇಳುವುದೇ ಒಳ್ಳಿತು."

"ಇರಲಿ. ನನ್ನ ಅಣ್ಣ ನನ್ನ ಮೇಲೆ ಯಾವ ಹೊಸಗಂಡಾಂತರದ ಮಳೆ ಗರೆಯಲು ಹೊರಟಿದ್ದಾನೆ—ಎಂಬುದನ್ನು ತಿಳಿಸು."

ನರಸಜ್ಜನ ಮಾತುಗಳನ್ನು ಪೂರ್ತಿಯಾಗಿ ಕೇಳಲು ತಾಳ್ಮೆಯಿಲ್ಲದ ಅಪ್ಪಾಜಿ ನಡುವೆ ಬಾಯಿಹಾಕಿದ.

"ನನ್ನ ದೊರೆ. ಈಗ ಹೇಳುವ ಸಂಗತಿಯನ್ನು ಕಿವಿಗೊಟ್ಟು ಕೇಳಿ." ನರಸಜ್ಜ ಉಸುರಿದ. "ನೀವು ಕಾಳಗದಲ್ಲಿ ಗೆಲುವುಪಡೆದ ವಾರ್ತೆಯನ್ನು ಹಿರಿಯಧನಿಗಳು ಕೇಳಿತಿಳಿದರು. ಜನರ ಹೊಗಳಿಕೆ ಅವರ ಕಿವಿಗಳಿಗೆ ತಲುಪಿತು. ಈ ಗೆಲುವು ಹೊಗಳಿಕೆಗಳು ಅವರ ಮನಸ್ಸಿನಲ್ಲಿ ಹೊಗೆಯಾಡುತ್ತಿದ್ದ ದ್ವೇಷದ ಬೆಂಕಿಗೆ ತುಪ್ಪವನ್ನು ಸುರಿದಿವೆ. ಇಂದು ರಾತ್ರಿ ನೀವು ಮಲಗಿ ನಿದ್ರಿಸುವಾಗ, ನಿಮ್ಮ ಕೊಠಡಿಗೆ ಕಿಚ್ಚನ್ನಿಕ್ಕಿ, ನಿಮ್ಮನ್ನು ಜೀವಸಹಿತ ಸುಟ್ಟು ಬೂದಿಮಾಡಬೇಕೆಂದಿರುವರು. ಈ ಕುತ್ತದಿಂದ ನೀವು ಪಾರಾದರೆ ನಿಮ್ಮ ಜೀವತೆಗೆಯಲು ಬೇರೇನಾದರೂ ಸಂಚನ್ನು ಹೂಡುವರು. ಅವರ ನೀಚ ಬುದ್ಧಿ ಯಾವ ಪಾಪಕೃತ್ಯವನ್ನು ಮಾಡಲೂ ಹೇಸದು. ಇದು ಮನೆಯಲ್ಲ; ಕಟುಕನ ಅಂಗಡಿ! ಈ ಮನೆಯೊಳಗೆ ಹಜ್ಜೆಯನ್ನಿರಿಸದಿರಿ; ಅದು ಮಾರಿಯಮ್ಮನ ಮಂದಿರ! ಅದನ್ನು ಧಿಕ್ಕರಿಸಿರಿ!"

"ನರಸಜ್ಜ, ನಿನ್ನ ಮಾತುಕೇಳಿ ಕಾಲಡಿಯ ನೆಲವೇ ಕುಸಿದಂತಾಗಿದೆ. ಮನೆಯೇ ಮುನಿದೆದ್ದರೆ ನಾನು ಎಲ್ಲಿಗೆ ಹೋಗಲಿ? ನನಗೆ ನೆರವುಗೈಯುನ್ನು

ಚಾಚಿ ಕಾಯಬಲ್ಲ ಬಂಧುಬಾಂಧವರು ಯಾರೂ ಇಲ್ಲ. ಎಲ್ಲಿಗೆಹೋಗಲಿ?"

ನರಸಜ್ಜ ಹೇಳಿದ ವಾರ್ತೆಯನ್ನು ಕೇಳಿ ಅಪ್ಪಾಜಿಗೆ ಆಗಸವೇ ಕಳಚಿ ನೆತ್ತಿಯಮೇಲೆ ಬಿದ್ದಂತಾಯಿತು. ಮನೆಯೊಳಗೆ ತನ್ನನ್ನು ಇದಿರುನೋಡುತ್ತಾ ಹೊಸದೊಂದು ವಿಪತ್ತು ಕಾದುಕುಳಿತಿರುವುದನ್ನು ತಿಳಿದು ಅವನ ಬುದ್ಧಿ ಕುಂಠಿತವಾಯಿತು. ಮುಂದೇನು ಗೈವುದೆಂಬುದು ಅವನ ಮತಿಗೆ ಹೊಳೆಯಲಿಲ್ಲ.

"ನೀವು ಎಲ್ಲಿಗೆ ಹೋದರೂ ಚಿಂತೆಯಿಲ್ಲ ನನ್ನ ದೊರೆ." ಮುದುಕ ಹೇಳಿದ. "ನೀವು ಈ ಮಾರಿಯ ಮಂದಿರದೊಳಗೆ ಅಡಿಯಿರಿಸದಿದ್ದರೆ ಸರಿ. ಇದು ಮನೆಯಲ್ಲ; ಹಾವಿನ ಹುತ್ತ."

"ಎಲ್ಲಿಗೆ ತೆರಳಿದರೂ ನಾನು ಉಣಬೇಡವೇ? ಅಪ್ಪಾಜಿಯ ಹಣೆಯ ಮೇಲೆ ಚಿಂತೆಯ ಗೆರೆಗಳು ಕಾಣಿಸಿಕೊಂಡವು "ಉಪಜೀವನಕ್ಕೆ ಅಗತ್ಯವಾದ ಯಾವ ಕಾರ್ಯವನ್ನೂ ನಾನು ಕಲಿತಿಲ್ಲ. ಬೀದಿ ಬೀದಿಯಲೆದು ತಿರುಪೆ ಯೆತ್ತಿ ಕುಲದ ಮಾನ ಕಳೆಯಲೇ? ಕೈಯಲ್ಲಿ ಕತ್ತಿಯನ್ನು ಹಿಡಿದು ದಾರಿಗಳ್ಳ ನಾಗಿ ಪ್ರಯಾಣಿಕರನ್ನು ಸುಲಿದು ಹೊಟ್ಟೆಹೊರೆಯಲೇ? ಆದರೆ ಕಳ್ಳತನದ ನೀಚವೃತ್ತಿಯನ್ನು ಕೈಗೊಂಡು ತಂದೆಯ ಹೆಸರನ್ನು ಕಳಂಕಗೊಳಿಸಲು ನನ್ನ ಆತ್ಮ ಒಪ್ಪದು. ಅದರ ಬದಲು ಕುಟಿಲಬುದ್ಧಿಯ ಸೋದರನ ಘಾತುಕ ತನಕ್ಕೆ ಸಂತೋಷದಿಂದ ಜೀವವನ್ನು ಒಪ್ಪಿಸುವೆನು."

"ನನ್ನೊಡೆಯ, ನೀವು ಅಷ್ಟೊಂದು ನಿರಾಶೆಯನ್ನು ತಾಳುವುದು ಬೇಡ". ನರಸಜ್ಜ ಹೇಳಿದ. "ನನ್ನಲ್ಲಿ ಐನೂರು ಭಂಗಾರದ ನಾಣ್ಯಗಳಿವೆ."

"ನಿನ್ನಲ್ಲಿ ಬಂಗಾರದ ನಾಣ್ಯಗಳಿದ್ದರೆ ನನಗೇನು ಪ್ರಯೋಜನ ನರಸಜ್ಜ?"

"ನಾನು ಇನ್ನೂ ಚಿಕ್ಕ ಹೈದನಾಗಿದ್ದಾಗ ಮಾಲೂರು ಜಹಗೀರದಾರರ ಊಳಿಗವನ್ನು ಕೈಗೊಂಡೆ. ನಿಮ್ಮ ತಂದೆ ಹಸುಳೆಯಾಗಿದ್ದಾಗ, ಅವರನ್ನು ಎತ್ತಿ ಆಡಿಸಿದ ಕೈಗಳಿವು. ನಿಮ್ಮ ಮೂವರನ್ನೂ ಎತ್ತಿ ಮುದ್ದಾಡಿಸಿದೆ. ಹಳೆಯ ದನಿ ರಾಚಯ್ಯ ಒಡೆಯರು ಕೊಡುತ್ತಿದ್ದ ಸಂಬಳದಲ್ಲಿ, ಉಳಿಸಿ ಐನೂರು ಬಂಗಾರಗಳನ್ನು ಕೂಡುಹಾಕಿದ್ದೇನೆ. ನಾನು ಮುದುಕನಾಗಿ ಓಡಾಡಲು ಮೈಕೈಗಳಲ್ಲಿ ತ್ರಾಣವಿಲ್ಲದೆ ಮೂಲೆನೇರಿದಾಗ, ನನ್ನ ರಕ್ಷಣೆಗೆ ಆಪದ್ಧನವಾಗಿರಲೆಂದು ನಾಗರ ಹಾವಿನಂತೆ ಹಣವನ್ನು ಜೋಪಾನ ಮಾಡಿ ದ್ದೇನೆ. ಮಾಲೂರು ಜಹಗೀರುದಾರರ ಸೇವೆಯಲ್ಲಿ ಅರುವತ್ತು ಮಳೆಗಾಲಗಳು ಕಳೆದುಹೋದುವು."

"ಹೌದು ನರಸಜ್ಜ. ನೀನು ತುಂಬಾ ವರ್ಷ ಈ ದೇಹವನ್ನು ಗಂಧದ ಕೊರಡಿನಂತೆ ತೇದಿರುವೆ." ಅಪ್ಪಾಜಿ, ನರಸಜ್ಜನ ಮಾತಿನ ಮರ್ಮವನ್ನರಿಯದೆ ಹೇಳಿದ. "ನೀನಿನ್ನು ವಿಶ್ರಾಂತಿಯನ್ನು ಹೊಂದುವುದು ಅಗತ್ಯ. ನರಸಜ್ಜ, ನೀನು ಇನ್ನು ಊಳಿಗವನ್ನು ಬಿಟ್ಟುಬಿಡು. ವಾಸಕ್ಕೊಂದು ಗುಡಿಸಲು ಮಾಡಿಕೊಂಡು ನೆಮ್ಮದಿಯಿಂದ ಬಾಳು. ಜೀತಮಾಡಿ ನಿನ್ನ ಬೆನ್ನು ಬಾಗಿ ಹೆದೆಯೇರಿಸಿದ ಬಿಲ್ಲಿನಂತಾಗಿದೆ."

"ದೊರೆ,—ನನ್ನ ವಿಶ್ರಾಂತಿ ಸುಖಗಳಿಗೆ ಬೆಂಕಿಬೀಳಲಿ! ಯಾವಾತ ಕಾಡಿನಲ್ಲಿರುವ ಹರಿಣಹುಲ್ಲೆಗಳಿಗೆ ಹುಲ್ಲು ನೀರುಗಳನ್ನೊದಗಿಸಿ ಕಾಯುವನೋ, ಯಾವಾತ ಬಾಂದಳದಲ್ಲಿ ಹಾರುವ ಹಂಸಕಪೋತಗಳನ್ನು ರಕ್ಷಿಸುವನೋ ಆತನೇ ನನ್ನನ್ನು ಮುಪ್ಪಿನಲ್ಲಿ ಪೊರೆಯುವನು."

"ನರಸಜ್ಜ, ಇದೇನು ವೇದಾಂತವನ್ನು ಮಾತಾಡಲು ತೊಡಗಿರುವೆ?"

"ವೇದಾಂತವಲ್ಲ ನನ್ನೊಡೆಯ! ನೀವು ಆಪತ್ತಿನಲ್ಲಿ ಸಿಲುಕಿರುವಿರಿ. ಈ ಸಂಕಟಕಾಲದಲ್ಲಿ ನನ್ನ ಈ ಐನೂರು ಬಂಗಾರಗಳನ್ನು ನೀವು ಬಳಸಿಕೊಳ್ಳಿರಿ!"

"ಬೇಡ ನರಸಜ್ಜ, ಬೆವರುನೆತ್ತರುಗಳನ್ನು ಸುರಿಸಿ ದೇಹವನ್ನು ತೇದು ಸಂಪಾದಿಸಿದ ಹಣವದು. ಅದನ್ನು ನಾನು ಉಪಯೋಗಿಸಿದರೆ ಪಾಪ ಬಂದೀತು!"

"ಪಾಪವೇನಿಲ್ಲ ನನ್ನ ದೊರೆ. ಮಾಲೂರು ಕುಟುಂಬದ ಉಪ್ಪು ಅನ್ನಗಳನ್ನುಂಡು ಈ ಮೈ ಬಳೆಯಿತು; ಸೇವೆಮಾಡಿತು; ಕೊನೆಗೆ ಹಣ್ಣಾಯಿತು. ನನ್ನ ದೇಹದ ಪ್ರತಿಯೊಂದು ಅಂಗವೂ ಮಾಲೂರು ಕುಟುಂಬಕ್ಕೆ ಸೇರಿದುದು. ನನ್ನ ಈ ಗಳಿಕೆಯನ್ನು ನಿಮಗೊಪ್ಪಿಸುವುದರಲ್ಲಿ ತ್ಯಾಗವೇನಿಲ್ಲ. ಹೊಳೆಯ ನೀರನ್ನು ಹೊಳೆಗೆ ಚೆಲ್ಲುವೆನು ಅಷ್ಟೆ."

"ನರಸಜ್ಜ, ನೀನು ಜೀತದಾಳಲ್ಲ. ಸ್ವಾರ್ಥಮಯ ಜಗತ್ತಿಗೆ ಬೆಳಕು ತೋರಲೆಂದು ಆಕಾಶದಿಂದ ಇಳಿದ ದೇವತೆ!"

"ನಾನು ಮುದುಕನೆಂಬುದು ನಿಜ," ನರಸಜ್ಜ ಅಪ್ಪಾಜಿಯ ನುಡಿಯನ್ನು ಕಿವಿಗೆ ಹಾಕಿಕೊಳ್ಳದೆ ಮಾತು ಮುಂದುವರಿಸಿದ. "ಆದರೆ ನಿಮ್ಮ ಊಳಿಗವನ್ನು ಇನ್ನೂ ಕೆಲಕಾಲ ಮಾಡುವ ತ್ರಾಣ ನನ್ನ ಮೈಕೈಗಳಲ್ಲಿದೆ. ನಾನು ಎಳೆಪರೆಯದಲ್ಲಿ ಕಳ್ಳುಸರಾಯಿಗಳನ್ನು ಸೇವಿಸಿ, ದೇಹಶಕ್ತಿಯನ್ನು ಕಳಕೊಂಡಿಲ್ಲ. ಸಲ್ಲದ ಹೊಲಸು ಕಾಮವಿಕಾರಗಳಿಗೊಳಗಾಗಿ ಮೈಯನ್ನು

ನ್ಮೈಲಿಗೆಗೊಳಿಸಿಲ್ಲ. ನನ್ನ ಕೈಕಾಲುಗಳು ಬತ್ತಿದರೂ, ಉಕ್ಕಿನ ತುಂಡು ಗಳಂತೆ ಸದೃಢವಾಗಿವೆ!"

ಈ ವೃದ್ಧನ ಸೇವಕನ ಸ್ವಾಮಿನಿಷ್ಠೆ, ಅವನು ತನ್ನಲ್ಲಿ ಇರಿಸಿದ ಪ್ರೀತಿ ವಿಶ್ವಾಸಗಳನ್ನು ಕಂಡು ಅಪ್ಪಾಜಿಗೆ ಕೌತುಕವಾಯಿತು. ಎದೆ ಕೃತಜ್ಞತೆ ಯಿಂದ ತುಂಬಿತು. ವಜ್ರದ ಹರಳುಗಳು ಮಣ್ಣಿನಲ್ಲಿ ಹುದುಗಿರುತ್ತವೆ, ಅವು ಗಳನ್ನು ಆರಿಸಿ, ಕಲ್ಲುಹರಳುಗಳಿಂದ ಬೇರ್ಪಡಿಸಿ ತೆಗೆಯುವ ಕಣ್ಣುಗಳು ಬೇಕು. ಅಂತೆಯೇ ಸಾಮಾನ್ಯ ಜನಜಂಗುಳಿಯಲ್ಲಿಯೂ ರತ್ನಪ್ರಾಯರಾದ ಮನುಷ್ಯರಿರುತ್ತಾರೆ. ಅವರನ್ನು ಅರಿಯುವ ಅಂತರ್‌ದೃಷ್ಟಿ ಮಾನವನಿಗಿರ ಬೇಕು.

ಈ ಮುದಿ ಆಳಿನೊಡನೆ ತನ್ನ ಅಣ್ಣ ತಿಬಲನನ್ನು ಅಪ್ಪಾಜಿ ಹೋಲಿಸಿ ನೋಡಿದ. ಅಣ್ಣ ಸತ್ಕುಲಪ್ರಸೂತ; ಒಂದು ದೊಡ್ಡ ಜಹಗೀರಿಯ ಮಾಲಿಕ. ಆದರೆ ಆತ ಒಡಹುಟ್ಟಿದ ಸೋದರನಿಗೆ ಸಾಲುಕೊಡಲು ಒಪ್ಪದೆ ಸೋದರ ಹತ್ಯೆಯ ಘೋರ ಪಾಪವನ್ನು ಆಚರಿಸಲು ಉದ್ಯುಕ್ತನಾಗಿದ್ದಾನೆ! ಆದರೆ ನರಸಜ್ಜ ಕುಟುಂಬಸೇವೆಯಲ್ಲಿ ಮೈಯನ್ನು ತೇದ ಜೀತದಾಳು. ಓದುಬರಹ ಗಳನ್ನು ಕಲಿಯಲಿಲ್ಲ; ಸಭ್ಯಸಮಾಜದ ಆಚಾರ ವ್ಯವಹಾರಗಳನ್ನು ಅರಿತಿಲ್ಲ. ನಾಗರಿಕತೆಯ ಗಾಳಿಸೋಂಕದ ಸರಳ ಹೃದಯ. ಆದರೆ ತನ್ನ ಜೀವಮಾನದ ಸಂಪಾದನೆಯನ್ನು ಧನಿಯ ಜೀವ ಉಳಿಸಲು ವಿನಿಯೋಗಿಸಿದ್ದಾನೆ! ಸಂಬಳ ಪ್ರತಿಫಲಗಳನ್ನು ಕಾಂಕ್ಷಿಸದೆ ತನ್ನ ಊಳಿಗವನ್ನು ಕೈಗೊಂಡು, ಅಜ್ಞಾತವಾಸ ವನವಾಸಗಳ ಸಂಕಟ ದುರಿತಗಳನ್ನು ಅನುಭವಿಸಲು ಸಂತೋಷದಿಂದ ಮುಂದೆ ಬಂದಿದ್ದಾನೆ! ಈ ಪ್ರಪಂಚ ಇನ್ನೂ ಹಾಳಾಗಿಲ್ಲ. ಮಾನವನು ಉದಾತ್ತ ಗುಣವುಳ್ಳ ಪ್ರಾಣಿ ಎಂಬುದನ್ನು ಜಗತ್ತಿಗೆ ಸಾರಲೋ ಎಂಬಂತೆ ಅಲ್ಲೊಬ್ಬ ಇಲ್ಲೊಬ್ಬರಂತೆ ಕೆಲಮಂದಿ ಸತ್ಪುರುಷರು, ಪ್ರಕ್ಷುಬ್ಧ ಸಾಗರದಲ್ಲಿ ಇರುಳು ಅಲೆವ ಹಡಗುಗಳಿಗೆ ದಾರಿತೋರಲು, ಬಂಡೆಗಳ ಮೇಲೆ ನಿಂತ ದೀಪ ಸ್ತಂಭಗಳಂತೆ ಬೆಳಗುತ್ತಿರುವರು.

"ನರಸಜ್ಜ, ನೀನು ಇನ್ನುಮೇಲೆ ಜೀತದಾಳಲ್ಲ". ಅಪ್ಪಾಜಿಯ ಕೊರಳು ಕಟ್ಟಿತು. ಕಣ್ಣುಗಳಿಂದ ಬಾಷ್ಪಸ್ರೋತ ಹರಿಯಿತು. ಅವನು ನರಸಜ್ಜನನ್ನು ಬಿಗಿದಪ್ಪಿಕೊಂಡು ಹೇಳಿದ. "ನೀನು ಆಳಿನ ರೂಪ ತಾಳಿಬಂದ ನನ್ನ ಭಾಗ್ಯ ದೇವತೆ! ನೀನು ಕಳೆದುಹೋದ ಮುತ್ತು ಮರಳಿಬಾರದು ಹಳೆಯ ಜಗತ್ತನ್ನು

ನೆನಪಿಗೆ ತರುತ್ತೀಯೆ. ನೀನು ಕರ್ತವ್ಯದೃಷ್ಟಿಯಿಂದ ದುಡಿಯುತ್ತಿರುವೆಯಲ್ಲದೆ, ಲಾಭದೃಷ್ಟಿಯಿಂದಲ್ಲ. ಇರಲಿ, ನಿನ್ನ ಇಚ್ಛೆಯಂತೆಯೇ ಆಗಲಿ. ನಾವು ಒಂದುಗೂಡಿ ಇಲ್ಲಿಂದ ಹೋಗೋಣ. ವನವಾಸ ಅಜ್ಞಾತವಾಸದ ಬೇವು ಬೆಲ್ಲಗಳನ್ನು ಮೆಲ್ಲುವುದರಲ್ಲಿ ಪಾಲುಗಾರರಾಗೋಣ."

"ನನ್ನ ಪುಟ್ಟ ದೊರೆ, ಈ ದೇಹದಲ್ಲಿ ಕೊನೆಯುಸಿರಿರುವವರೆಗೆ ನಾನು ನಿಮ್ಮ ಸೇವೆಯನ್ನು ಮಾಡುವೆನು. ಅರುವತ್ತು ಮಳೆಗಾಲ ಈ ಮನೆಗೆ ನನ್ನ ಸೇವೆಯನ್ನು ಮುಡಿಪಾಗಿರಿಸಿದೆ. ಆದರೆ ನನ್ನ ಕಿರಿಯಧನಿಗೆ ಆಸರೆಗೊಡದ ಈ ಹಾಳುಮನೆಯಲ್ಲಿ ಇನ್ನು ಒಂದು ಗಳಿಗೆ ನಿಲ್ಲಲಾರೆ." ಎಂದು ನರಸಜ್ಜ ಹೇಳಿದ.

ಬಂಧುವಿಹೀನ ಅಪ್ಪಾಜಿಗೆ ಸೇವಕ ನರಸಜ್ಜನೇ ಆಪದ್ಬಂಧುವಾದ. ಅವನು ಈ ನೆಚ್ಚಿನ ಮುದಿಯ ಸೇವಕನೊಡನೆ ಸ್ವಗೃಹವನ್ನು ತೊರೆದು, ಅಪರಿಚಿತ ಜಗತ್ತಿನಲ್ಲಿ ತನ್ನ ಭಾಗ್ಯವನ್ನು ಅರಸಲು ಉದ್ಯುಕ್ತನಾದ.

---

## ಒಂಭತ್ತು

ಹೂವಯ್ಯ ಮತ್ತು ಮಲ್ಲಿಗೆ ಹುದುಗೂರು ಅರಣ್ಯದ ದಾರಿಯನ್ನು ಹಿಡಿದು ಪಯಣವನ್ನು ಮುಂದುವರಿಸಿದರು. ಮೊದಲು ಕೆಲದಿನ ಅವರ ಪಯಣ ಆಹ್ಲಾದಕರವಾಗಿತ್ತು. ಹೂವಯ್ಯ ವಿನೋದಪೂರ್ಣ ವಚನಗಳಿಂದ ತಂಗಿ ಮಲ್ಲಿಗೆಯ ಬೇಸರ ಕಳೆಯುತ್ತಿದ್ದ; ಮಾರ್ಗಾಯಾಸ ಅವಳಿಗೆ ತೋರದಂತೆ ಮಾಡುತ್ತಿದ್ದ. ದಾರಿಯಲ್ಲಿ ತೋರುವ ಹಳ್ಳಕೊಳ್ಳ ಗಿರಿಗುಡ್ಡ ಮೊದಲಾದ ಸುಂದರ ದೃಶ್ಯಗಳನ್ನು ತೋರಿಸಿಕೊಡುತ್ತಿದ್ದ. ಬಾಂದಳದಲ್ಲಿ ರೆಕ್ಕೆಗಳನ್ನು ಅಗಲಿಸಿ ಯಾವುದಾದರೂ ಒಂದು ಹಕ್ಕಿ ಹಾರಿದರೆ, ಅದನ್ನು ಗುರುತಿಸಿ ತಂಗಿಗೆ ತೋರಿಸಿಕೊಡುತ್ತಿದ್ದ. ಹಳ್ಳಿಗಾಡುಗಳಲ್ಲಿ ಬೆಳೆದು ನಿಂತ ತರುಲತೆಗಳ ಕುಸುಮ ಸೌರಭವನ್ನು ಹೊತ್ತುತಂದ ಮಂದಾನಿಲ ಅವರ ಮೈಕೈಗಳನ್ನು ತಡವಿ ಮಾರ್ಗಾಯಾಸವನ್ನು ಪರಿಹರಿಸುತ್ತಿದ್ದಿತು. ಪಥಶ್ರಮಣದಿಂದ ಬಳಲಿದ ಅವರ ಎದೆಗಳಲ್ಲಿ ನವೋನ್ಮೇಷವನ್ನು ತುಂಬುತ್ತಿದ್ದಿತು.

ಸಂಜೆಯಾದಾಗ ಅವರು ಹಳ್ಳಿಯ ಸತ್ರದಲ್ಲಿ ತಂಗುತ್ತಿದ್ದರು. ಸತ್ರವಿಲ್ಲದ ಹಳ್ಳಿಯಾದರೆ ಉದಾರಾಂತಃಕರಣಿಗರಾದ ಹಳ್ಳಿಗರ ಮನೆಗಳಲ್ಲಿ ಆಸರೆ ಪಡೆಯುತ್ತಿದ್ದರು. ದಯಾರ್ದ್ರ ಹೃದಯರಾದ ನೆಲದವ್ವನ ಅಣುಗರು ಮನೆಗೈತಂದ ಅತಿಥಿಗಳನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಸತ್ಕರಿಸಿ ಉಪಚರಿಸುತ್ತಿದ್ದರು; ಸವಿ ಉಣಿಸುಗಳನ್ನಿತ್ತು ಅವರ ಹಸಿವೆಯನ್ನು ಕಳೆಯುತ್ತಿದ್ದರು. ಮರುದಿನ ಮುಂಜಾನೆ ದಾರಿಗರು ಹೊರಟಾಗ ನಡುಹೊತ್ತಿನ ಊಟಕ್ಕೆಂದು ಬುತ್ತಿಗಳನ್ನು ಕಟ್ಟಿಕೊಡುತ್ತಿದ್ದರು.

ಹೀಗೆ ದಾರಿಯುದ್ದಕ್ಕೂ ಜನರ ನೆರವುಗೈ ಸಹಾಯಕ್ಕಿದ್ದುದರಿಂದ ಹೂವಯ್ಯ ಮಲ್ಲಿಗೆಯರಿಗೆ ಪ್ರಯಾಣ ಶ್ರಮದಾಯಕವಾಗಲಿಲ್ಲ. ಅದೊಂದು ಉಲ್ಲಾಸ ಸಂಚಾರದಂತೆ ಅವರಿಗೆ ತೋರಿತು. ಗ್ರಾಮಾಂತರಗಳ ಪ್ರಶಾಂತ ವಾತಾವರಣ ಅವರಿಗೆ ಆಪ್ಯಾಯಮಾನವೆನಿಸಿತು. ರಾಜಧಾನಿಯ ವಿಲಾಸ ವೈಭವಮಯ ಜೀವನಕ್ಕಿಂತ ಹಳ್ಳಿಯ ಬದುಕು ಅವರಿಗೆ ನೂರ್ಮಡಿ ಹಿತವೆನಿಸಿತು; ಸೊಗಸೆನಿಸಿತು; ಚೆಲುವೆನಿಸಿತು. ಅವರು ರಾಜಪ್ರಾಸದದ ಸುಖಸೌಕರ್ಯಗಳನ್ನು ಮರೆತರು. ಅರಮನೆಯ ಜೀವನ ನೈಜತೆಯನ್ನು ಕಳಕೊಂಡ ಕೃತ್ರಿಮದ ಬದುಕೆಂದು ಅವರಿಗೆ ತೋರಿತು. ಅರಳಿ ಕಂಪನ್ನು ಎಣ್ದೆಸೆಗಳಿಗೆ ಹೊರಚೆಲ್ಲಿ ಭೃಂಗಗಳಿಗೆ ಮಕರಂದವನ್ನುಣ್ಣಲು ಆಮಂತ್ರಣವನ್ನೀವ ಕಾಡ ಅಲರುಗಳಲ್ಲಿ ಚೆಲುವಿನ ಬುಗ್ಗೆಯನ್ನು ನೋಡಿದರು. ಮರಗಳ ಕೊಂಬೆಗಳನ್ನೇರಿ ಹಾಡುವ ಹಕ್ಕಿಗಳ ನೂರು ಬಗೆಯ ಕೊರಳಿಂಚರಗಳಲ್ಲಿ, ಅರಮನೆಯ ಸಂಗೀತಗಾರರ ರಾಗಾಲಾಪನೆಯಲ್ಲಿ ಕಂಡುಬರದ ಸಂಗೀತಸುಧೆ ತುಂಬಿರುವುದನ್ನರಿತರು. ಹಂಸಕೇಕಿಗಳ ಲಾಸ್ಯದಲ್ಲಿ ಅರಮನೆಯ ನರ್ತಕಿಯರ ಕುಣಿತಗಳಲ್ಲಿ ತೋರಿಬರದ ಸೊಬಗನ್ನು ಅವಲೋಕಿಸಿದರು. ಅವರು ದಾರಿಯುದ್ದಕ್ಕೂ ಚೆಲುವು ನಲವುಗಳನ್ನು ಮೆಲ್ಲುತ್ತಾ ಮುಂದೆ ಸಾಗಿದರು.

ಅವರು ಹುದುಗೂರು ಅಡವಿಯನ್ನು ಸಮೀಪಿಸಿದಂತೆ ಹಳ್ಳಿಗಳು ದೂರ ದೂರವಾದುವು. ಮಾರ್ಗದಲ್ಲಿ ಮುನ್ನಿನಂತೆ ದಾರಿಗರು ದೊರೆಯದಾದರು. ದಾರಿ ಕಲ್ಲುಮುಳ್ಳುಗಳಿಂದ ನಿಬಿಡವಾಯಿತು. ಹೊತ್ತಿಗೆ ಸರಿಯಾಗಿ ಆಹಾರ ದೊರೆಯದಾಯಿತು. ಮೇಡುಗಳನ್ನೇರಿ, ಗುಡ್ಡಗಳನ್ನಿಳಿದು, ಕಣಿವೆಗಳಲ್ಲಿ ನುಗ್ಗಿ ಅವರು ಮುನ್ನಡೆಯಬೇಕಾಯಿತು. ತಮಗಿಂತಲು ಉನ್ನತರು ಇಳೆಯಲ್ಲಿ ಯಾರಿರುವರೆಂದು ಪರಿಕಿಸಲು ನಿಂತಂತೆ ತೋರುವ ಮಹೋನ್ನತ

ವೃಕ್ಷರಾಜಿಗಳು ಅವರಿಗೆ ಗೋಚರಿಸಿದುವು. ತಾವು ಅಬಲೆಯರಾದರೂ, ಸಬಲೆಯರೆಂಬುದನ್ನು ಲೋಕಕ್ಕೆ ಸಾರುವಂತೆ, ಎತ್ತರದ ಮರಗಳನ್ನು ಸುತ್ತಿ ಬಳಸಿ, ವೃಕ್ಷದ ತುಟ್ಟತುದಿಗೇರಿ, ಕೊಂಬೆ ಕವಲುಗೊಂಬೆಗಳನ್ನು ಮುಸುಕಿದ ಬಳ್ಳಿಗಳು. ಮಾನವನ ಅಧಿಕಾರವ್ಯಾಪ್ತಿಗೆ ಕಾಡು ಹೊರಗಾದುದು; ಇಲ್ಲಿ ಅವನನ್ನು ಅಡಿಯಿಡಲು ಬಿಡೆವು ಎಂದು ತಡೆದು ನಿಂತ ಪೊದೆಗಳ ಸೆರವಿ. ಕಾನನಾಂತರಾಳದಿಂದ ಹೊರಟು ಬಂದು ಮರಗಳಲ್ಲಿ ಕಂದರಗಳಲ್ಲಿ ಮಾರುಲಿಗೊಡುವ ಹುಲಿಗಳ ಭೀಕರ ಗರ್ಜನೆಗಳಿಂದ ಯಾರ ಎದೆಯಾದರೂ ಕಂಪಿಸದೆ ಇರದು. ಹೀಗೆ ಘೋರವಾದ ಅರಣ್ಯದಲ್ಲಿ ಅವರು ಪ್ರವೇಶಿಸಿದರು.

ದಿನವೆಲ್ಲ ನಡೆದರೂ ದಾರಿ ಮುಗಿಯದು. ಪದಚ್ಯುತ ದೊರೆ ಇರುವ ಸ್ಥಾನ ಯಾವುದೆಂಬುದು ಅವರಿಗೆ ತಿಳಿಯದು. ವಿಪಿನ ವಿಶಾಲವಾದುದು. ಈ ವನಗರ್ಭದಲ್ಲಿ ದೊರೆಯನ್ನು ಅರಸುವುದೆಲ್ಲಿ? ಹೊತ್ತಿಗೆ ಸರಿಯಾಗಿ ಉಣಿಸು ತಿನಸುಗಳು ದೊರೆಯದಾದುವು. ಗಿಡಗಳಲ್ಲಿ ಕಳಿತು ಜೋಲುತ್ತಿರುವ ಕಾಡುಹಣ್ಣುಗಳೇ ಅವರ ನಿತ್ಯದೂಟಗಳಾದುವು. ಪಾದಗಳಿಗೆ ನಾಟುತ್ತಿರುವ ಮುಳ್ಳುಗಳು, ಕಾಡಿನಂತೆಯೆ ಜೀವನವು ಸಹ ಕಂಟಕಮಯವಾಗಿದೆಯೆಂಬುದನ್ನು ಹಜ್ಜೆಹಜ್ಜೆಗೆ ನೆನಪಿಗೆ ತರುತ್ತಿದ್ದುವು. ಕಾನನದ ಭೀಕರತೆ ಪಯಣಿಗರ ಕೆಚ್ಚನ್ನು ಉಡುಗಿಸಿತು; ಅವರ ಎದೆಗಳಲ್ಲಿದ್ದ ಉತ್ಸಾಹದ ಚಿಲುಮೆಯನ್ನು ಬತ್ತಿಸಿ ನಿರಾಶೆಯನ್ನು ತುಂಬಿಸಿತು. ಅವರ ಕಾಲುಗಳು ನಡೆದು ಸೋತುವು. ಮುಂದೆ ಅಡಿಯಿಡುವುದು ಕಷ್ಟವೆನಿಸತೊಡಗಿತು. ಮಲ್ಲಿಗೆ ನಡೆಯಲಾರದೆ ಹಿಂದೆಬೀಳತೊಡಗಿದಳು. ಆಕೆಯ ಪಾದಗಳು ಬೀಗಿದುವು. ಮುಳ್ಳುನಾಟಿ ಗಾಯವಾದುದರಿಂದ ರಕ್ತ ಬಸಿಯುತ್ತಿದ್ದಿತು.

"ಈ ಪಯಣದ ಕೊನೆಯೆಲ್ಲಿ?" ಒಂದು ಮರದ ನೆರಳಿನಲ್ಲಿ ಕುಳಿತು ಹೂವಯ್ಯ ಒಂದು ನಿಟ್ಟುಸಿರನ್ನು ಬಿಟ್ಟ. "ನನ್ನ ಧೈರ್ಯೋತ್ಸಾಹಗಳು ಬತ್ತತೊಡಗಿವೆ!"

"ಅಣ್ಣ,—ನೀನು ಗಂಡಸು. ನನ್ನಂತಹ ಅಳ್ಳೆದೆಯ ಹೆಣ್ಣಿಗೆ ಧೈರ್ಯ ಹೇಳಿ ಸಮಾಧಾನಪಡಿಸಬೇಕಾದವನು ನೀನು. ಗಂಡುಡುಗೆಯನ್ನು ತೊಟ್ಟ ನೀನೇ ಧೈರ್ಯಗೆಟ್ಟು ನಡುಗಿದರೆ,—ಈ ಭಯಂಕರ ಅಡವಿಯಲ್ಲಿ ನನ್ನ ಗತಿ ಏನಾಗಬೇಕು."

ಎಂದು ನಾಲ್ಕು ಮಾರು ಹಿಂದೆ ಬರುತ್ತಿದ್ದ ಮಲ್ಲಿಗೆ ನುಡಿದಳು. ಅವಳ

ನುಡಿಗೇಳಿದಾಗ,—ಹೆಣ್ಣಾದ ಆಕೆಗೆ ಧೈರ್ಯ ವಚನಗಳನ್ನಾಡಿ ಸಾಂತ್ವನ ಗೊಳಿಸಬೇಕಾದ ಹೊಣೆ ತನ್ನಮೇಲಿದೆ ಎಂಬುದು ಹೂವಯ್ಯನಿಗೆ ಅರಿವಾಯಿತು.

"ಬಾ ತಂಗಿ, ಈ ಮರದಡಿಯಲ್ಲಿ ಕುಳಿತು ತುಸು ದಣುವಾರಿಸೋಣ." ಹೂವಯ್ಯ ಹೇಳಿದ. "ಇನ್ನೂ ನಾವು ಹೆಚ್ಚು ದೂರ ನಡೆಯಬೇಕಾಗಿ ಬರದು. ಸಮೀಪದಲ್ಲಿಯೇ ಗುಣವರ್ಮ ದೊರೆಯ ಸಂಕೇತಸ್ಥಾನ ದೊರೆಯಬಹುದು. ನಾವು ಅರಣ್ಯದ ಮಧ್ಯಪ್ರದೇಶವನ್ನು ಸೇರಿರುವೆನೆಂದು ತೋರುವುದು."

"ಅಣ್ಣ ನೋಡು, ನಿನ್ನ 'ಬಹುದು' ರಾಜ್ಯದ ವ್ಯಾಪ್ತಿ ಆಕಾಶಕ್ಕಿಂತಲೂ ವಿಶಾಲವಾದುದು. ನಿನ್ನ ಬಹುದು ರಾಜ್ಯಕ್ಕೆ ತಲುಪುವಾಗ ನನ್ನ ಆಯುಷ್ಯ ಕೊನೆಗೊಳ್ಳುವುದೋ ಎಂಬುದೇ ನನ್ನ ಸಂದೇಹ."

"ನಿನ್ನ ಸಂದೇಹವನ್ನು ಬಿಡು. ಒಂದುವೇಳೆ ದೊರೆಯ ನಿವಾಸಸ್ಥಾನ ದೊರೆಯಲಿಲ್ಲವೆಂದೇ ಇಟ್ಟುಕೋ. ಕಾಡಿನಲ್ಲಿ ಬೇಕಾದಷ್ಟು ಹಣ್ಣುಹಂಪಲುಗಳಿವೆ ಆಹಾರಕ್ಕೆ. ಮೃದುವಾದ ಚಿಗುರೆಲೆಗಳಿವೆ ಹಾಸಿಗೆಗೆ. ಇನ್ನೇನುಬೇಕು ನಮಗೆ! "

"ನಿಜ ಅಣ್ಣ, ಕೇವಲ ಹಣ್ಣುಹಂಪಲುಗಳೂ ಚಿಗುರುಹುಲ್ಲು ತಳಿರುಗಳೂ ಮಾತ್ರ ಕಾಡಿನಲ್ಲಿರುತ್ತಿದ್ದರೆ, ನಾನೇನು ಭಯಪಡುತ್ತಿರಲಿಲ್ಲ. ಆದರೆ ಹಾಳು ಹುಲಿಕರಡಿ ತೋಳ ಇತ್ಯಾದಿ ಅರಣ್ಯರಾಜ್ಯದ ಪ್ರಜೆಗಳಿರುವುವಲ್ಲ; ಬೇಡರು ಬೇರೆ ಇರುವರಲ್ಲ!"

"ನನ್ನ ಕೈಗೊಡಲಿಯಲ್ಲಿ, ಬಿಲ್ಲಂಬುಗಳಲ್ಲಿ ನಿನಗೆ ನಂಬುಗೆಯಿಲ್ಲವೇ? ನಿನ್ನ ಭೀತಿಯನ್ನು ಬಿಡು."

"ಅಣ್ಣ, ನೀನು ಯಾರೆಂಬುದು ನನಗೆ ತಿಳಿಯದೆ ಇದ್ದಿದ್ದರೆ ನಿನ್ನ ಬಿಲ್ಲಂಬುಗಳನ್ನು ನಂಬುತ್ತಿದ್ದೆ." ಮಲ್ಲಿಗೆಯ ತುಟಿಗಳ ಮೇಲೆ ಎಳೆನಗೆ ನರ್ತಿಸಿತು.

"ಅಹುದು, ಮಲ್ಲಿಗೆ. ನನ್ನ ಎದೆ ನಾನು ತೊಟ್ಟ ಗಂಡುಡಿಗೆಗಳಿಗೆ ಅವಮಾನ ತರುತ್ತಿದೆ. ನನಗೆ ಹೆಂಗಸಿನಂತೆ ಅಳಬೇಕೆಂದೆನಿಸುತ್ತದೆ." ಹೂವಯ್ಯ ಹೇಳಿದ. "ಆದರೆ ನನ್ನನ್ನೇ ಹಿಂಬಾಲಿಸಬಂದ ನಿನಗೆ ಧೈರ್ಯ ಹೇಳಿ ಸಮಾಧಾನಪಡಿಸುವುದು ನನ್ನ ಕರ್ತವ್ಯ. ಮಲ್ಲಿಗೆ, ನೀನು ಇಷ್ಟು ನಿರಾಶಳಾಗಬೇಡ. ಸ್ವಲ್ಪ ದೂರ ನಡೆಯುವನಿತರಲ್ಲಿ ನಮಗೊಂದು ಆಸರೆ ದೊರೆಯಬಹುದು.

"ಒಲ್ಲೆ ಅಣ್ಣ". ನೀರುತುಂಬಿದ ಕಣ್ಣುಗಳೊಡನೆ ಮಲ್ಲಿಗೆ ಹೇಳಿದಳು. "ನನ್ನ ಕಾಲುಗಳು ಸೋತುಸೊರಗಿವೆ. ಮುಂದೆ ನಡೆಯಿರೆಂದು ನಾನು ಹೇಳಿದರೂ, ಅವು ತುಂಟ ಹುಡುಗರಂತೆ ನನ್ನ ಮಾತುಗಳನ್ನು ಕೇಳುವುದಿಲ್ಲ. ಈ ಮರದಡಿಯೇ ನನ್ನ ಮಸಣವಾಗಲಿ".

"ಇಂತಹ ಅಭದ್ರವಚನಗಳನ್ನಾಡಬೇಡ." ಎಂದು ಹೂವಯ್ಯ ಮಲ್ಲಿಗೆಯ ಬಾಯಮೇಲೆ ಕೈಯಿರಿಸಿದ.

"ತನಗಿಂತಲೂ ಹೆಚ್ಚು ಮಲ್ಲಿಗೆ ದಣಿದಿರುವಳೆಂದು ಹೂವಯ್ಯ ಗ್ರಹಿಸಿದ. ಅವನ ಎದೆಯಲ್ಲಿ ಕನಿಕರ ಉದಿಸಿತು. ಅವನು ತಂಗಿಯ ಬೆನ್ನು ಸವರುತ್ತಾ "ಮಲ್ಲಿಗೆ— ಇಲ್ಲಿ ಸಮೀಪದಲ್ಲಿ ಎಲ್ಲಿಯಾದರೂ ತೊರೆ ಇರಬಹುದು ನಾನು ಅರಸಿ ಈ ತಂಬಿಗೆಯಲ್ಲಿ ನಿನಗೆ ಕುಡಿಯಲು ನೀರುತರುವೆನು" ಎಂದು ಉಸುರಿದ.

"ಬೇಡ ಅಣ್ಣ, ನೀನು ತೊರೆ ಅರಸಲು ಹೋಗಿ, ನನ್ನನ್ನು ತೊರೆದಂತಾದೀತು!"

ಮಲ್ಲಿಗೆಯ ನುಡಿ ಸಮಂಜಸವಾದುದು ಎಂದು ಹೂವಯ್ಯನಿಗೆ ಅನಿಸಿತು. ತಾನು ನೀರು ತರಲೆಂದು ಮಲ್ಲಿಗೆಯನ್ನು ಏಕಾಂಗಿಯಾಗಿ ಕಾಡಿನಲ್ಲಿ ಬಿಟ್ಟು ತೆರಳುವುದು ವಿಹಿತವಲ್ಲ. ಅರಣ್ಯದ ಕ್ರೂರಮೃಗಗಳಿಂದ ಏನಾದರೂ ಅಪಾಯ ಒದಗಬಹುದು ಎಂದು ಅವನು ಆಲೋಚಿಸಿದ.

ಈ ಕಾಡೇ ತಮ್ಮ ಮಸಣವಾಗಿ ಪರಿಣಮಿಸಬಹುದೆಂಬ ಭೀತಿ ಹೂವಯ್ಯನ ಎದೆಯಲ್ಲಿ ಅಂಕುರಿಸಿತು. ಮುಂದಿನಬದುಕು ಮುಗಿಲುಕವಿದ ಬಾನಿನಂತೆ ತೇಜೋವಿಹೀನವಾಗಿ ತೋರಿತು. ಅವನು ಚಿಂತಾಕ್ರಾಂತನಾಗಿ ಕುಳಿತಿದ್ದಾಗ ಅರಣ್ಯಪಥದಲ್ಲಿ ಒಬ್ಬ ಮನುಷ್ಯ ನಡೆದುಬರುವುದು ಗೋಚರಿಸಿತು. ನಿರ್ಜನ ಕಾನನದಲ್ಲಿ ನರಜೀವಿಯೊಬ್ಬ ಕಾಣಸಿಕ್ಕಿದುದು ಅವರ ಎದೆಯಲ್ಲಿ ಕಮರಿದ್ದ ಆಸೆಗೆ ನೀರೆರೆದು ಕೊನರಿಸಿತು. ಹೂವಯ್ಯ ದಾರಿಗನನ್ನು ಉದ್ದೇಶಿಸಿ, "ಅಯ್ಯಾ, ನಾವು ದಾರಿತಪ್ಪಿ ಈ ಘೋರಾರಣ್ಯಕ್ಕೆ ಬಂದಿದ್ದೇವೆ. ನಾವು ನಿನಗೆ ಹಣಕೊಡುವೆವು. ನಮಗೆ ಒಂದಿಷ್ಟು ಆಹಾರ ವಸತಿಗಳನ್ನು ಒದಗಿಸಿದರೆ ನಿನಗೆ ಪುಣ್ಯಬರುವುದು" ಎಂದು ಬೇಡಿಕೊಂಡ.

"ಅಯ್ಯಾ, ನಾನೊಬ್ಬ ಸ್ವತಂತ್ರ ಜೀವಿಯಲ್ಲ." ಹೂವಯ್ಯನ ಯಾಚನೆಯನ್ನು ಕೇಳಿ ಆಗಂತುಕನ ಹೃದಯದಲ್ಲಿ ಮರುಕ ಹುಟ್ಟಿತು. "ನಾನೊಬ್ಬ

ಕುರಿಗಾಹಿಯ ಜೀತದಾಳು. ಇಲ್ಲಿಂದ ಸ್ವಲ್ಪ ದೂರದಲ್ಲಿಯೇ ಅವನ ಗುಡಿಸಲಿದೆ. ಅಲ್ಲಿ ನಿಮಗೆ ವಿಶೇಷ ಸೌಕರ್ಯಗಳು ದೊರೆಯಲಾರವು. ಏಕೆಂದರೆ ಅವನು ತನ್ನ ಮನೆಮಠಗಳನ್ನು ಮಾರಿ ಬೇರೆಕಡೆ ಒಕ್ಕಲುಹೋಗಲು ತೀರ್ಮಾನಿಸಿದ್ದಾನೆ. ನೀವು ಅವನ ಗುಡಿಸಲಿಗೆ ಬರುವಿರಾದರೆ ಕರಕೊಂಡು ಹೋಗುವೆನು."

"ನಿನ್ನ ಪುಣ್ಯ! ಹಸಿವೆಯನ್ನು ಅಡಗಿಸಲು ಒಂದು ಹಿಡಿ ಕೂಳು. ಅಡ್ಡಾಗಲು ಒಂದಿಷ್ಟು ಎಡೆ ದೊರೆತರೆ ಸಾಕು." ಹೂವಯ್ಯ ಹೇಳಿದ. "ವಿಶೇಷ ಉಪಚಾರಗಳನ್ನೇನೂ ನಾವು ನಿರೀಕ್ಷಿಸಿಲ್ಲ."

"ಹಾಗಿದ್ದರೆ ನೀವು ನನ್ನೊಡನೆ ಬನ್ನಿ." ಎಂದು ಕುರಿಗಾಹಿಯ ಆಳು ಅವರನ್ನು ಆಮಂತ್ರಿಸಿದ.

ತುಸು ವೇಳೆಯಲ್ಲಿಯೇ, ತಮಗೆ ಆಹಾರ ಮತ್ತು ವಿಶ್ರಮಿಸಲು ಆಸರೆ ದೊರೆಯುವುವೆಂಬ ಭರವಸೆ ಅವರಿಗೆ ಮುಂದೆ ನಡೆಯಲು ತ್ರಾಣವನ್ನು ಒದಗಿಸಿತು. ಅವರ ಕಾಲುಗಳು ಮರಳಿ ಹುರುಪನ್ನು ತಾಳಿದುವು. ಅವರು ಕುರಿಗಾಹಿಯನ್ನು ಹಿಂಬಾಲಿಸಿ ನಡೆಯತೊಡಗಿದರು. ಅರ್ಧ ತಾಸು ನಡೆಯುವನಿತರಲ್ಲಿ ಅವರು ಕುರುಬನ ವಸತಿಯನ್ನು ಸೇರಿದರು.

ಆ ಗುಡಿಸಲಿನ ಮಾಲಿಕ ಬಡ ಕುರುಬನಾದರೂ ಸೌಜನ್ಯದ ಮೂರ್ತಿಯಾಗಿದ್ದ. ಮನೆಗೆ ಬಂದ ಅತಿಥಿಗಳು ನಡೆದು ಬಹಳ ದಣಿದಿರುವರೆಂದು ಅವನು ತಿಳಿದ. ಅವನು ಅವರ ಕೈಕಾಲುಗಳಿಗೆ ನೀರುಕೊಟ್ಟು ಉಪಚರಿಸಿದ. ಅವರ ಹಸಿವೆಯನ್ನು ಪರಿಪರಿಸಲೆಂದು ಸೊಗಸಾದ ಬಾಳೆಹಣ್ಣುಗಳನ್ನು ನೀಡಿದ ನೀರಡಿಕೆಯನ್ನು ಹಿಂಗಿಸಲು ಆಗತಾನೇ ಕರೆದ ಕುರಿಹಾಲನ್ನು ಕೊಟ್ಟ. ಹಣ್ಣು, ಹಾಲು ಹೂವಯ್ಯ ಮಲ್ಲಿಗೆಯರ ದಣಿವನ್ನು ಆರಿಸಿದುವು. ಅವರ ಮೈ ಕೈಗಳು ಹೊಸ ಹುರುಪನ್ನು ತಾಳಿದುವು. ಸೊರಗಿದ ಅವರ ಮೊಗಗಳ ಮೇಲೆ ಸಂತಸದ ಕಿರಣಗಳು ಮಿನುಗತೊಡಗಿದುವು. ಅವರು ಆ ಗುಡಿಸಲಲ್ಲಿ ಉಳಿದು ತಮ್ಮ ಆಯಾಸವನ್ನು ಪರಿಹರಿಸಿಕೊಂಡರು.

ಆ ಗುಡಿಸಲು ಚಿಕ್ಕದಾದರೂ ಚೊಕ್ಕವಾದುದು. ಮುಂಗಡೆ ಕಿರಿಯ ಹೂದೋಟವಿದ್ದಿತು. ಅಂಗಣದಲ್ಲಿ ಹಣ್ಣುಗಳನ್ನು ಹೊತ್ತ ಮಾವು, ದಾಳಿಂಬೆ, ಗಿಡಗಳಿದ್ದುವು. ಕುರಿಗಳ ವಾಸಕ್ಕೆ ಪ್ರತ್ಯೇಕವಾದ ರೊಪ್ಪವಿದ್ದಿತು. ಗುಡಿಸಲೊಳಗೆ ವಾಸಕ್ಕೆ ಬೇಕಾದ ಎಲ್ಲಾ ಬಗೆಯ ಸೌಕರ್ಯಗಳಿದ್ದುವು. ಗುಡಿಸ

ಲಿನ ಅಚ್ಚುಕಟ್ಟುತನ ಹೂವಯ್ಯನ ಮನಸ್ಸನ್ನು ಸೆಳೆಯಿತು. ಅವನು ಮರು ದಿನ ಬೆಳಗ್ಗೆ ಮಲ್ಲಿಗೆಯನ್ನು, "ಏನು ಮಲ್ಲಿಗೆ, ಈ ಗುಡಿಸಲನ್ನು ಕುರುಬ ಮಾರುತ್ತಾನಂತೆ. ನಾವೇಕೆ ಕೊಂಡುಕೊಳ್ಳಬಾರದು?" ಎಂದು ಪ್ರಶ್ನಿಸಿದ.

"ಏನಣ್ಣ, ಕಾಡಿನಲ್ಲಿ ಜೀವಿಸುವ ಗುಣವರ್ಮ ರಾಜನನ್ನು ಅರಸುವುದು ಬಿಟ್ಟು, ಕುರುಬನಾಗುವ ಹುಚ್ಚು ನಿನಗೆ ಹಿಡಿಯಿತೇ? ಎಂದು ಮಲ್ಲಿಗೆ ಅಣ್ಣನ ಮೊಗವನ್ನು ನೋಡಿನಕ್ಕಳು.

"ಕಾಡಿನಲ್ಲಿ ಎಲ್ಲೆಂದು ದೊರೆಯನ್ನು ಅರಸುವುದು? ಹಾಗೆ ಹುಡುಕ. ಬೇಕಾದರೂ ನಮಗೊಂದು ಆಶ್ರಯಸ್ಥಾನಬೇಡವೇ? ಇಲ್ಲದಿದ್ದರೆ ನಿನ್ನೆ ನೀನು ಹೇಳಿದಂತೆ ಕಾಡೇ ನಮ್ಮ ಮಸಣವಾದೀತು!

"ಆಗಲಣ್ಣ. ನನಗಂತೂ ನಡೆದು ನಡೆದು ಬೇಸರ ಬಂದಿದೆ. ನಾಲ್ಕು ದಿನ ಹಾಯಾಗಿ ಈ ಗುಡಿಸಲಲ್ಲಿ ಇರೋಣ. ಆದರೆ ಕೊಂಡುಕೊಳ್ಳಲು ಹಣ ಬೇಕಲ್ಲ."

"ನಗರದಲ್ಲಿ ನಮ್ಮ ಆಭರಣಗಳನ್ನು ಮಾರಿದ ಗಂಟು ಇದೆಯಲ್ಲ."

"ಹೂಂ, ವ್ಯಾಪಾರ ನಡೆದುಹೋಗಲಿ. ನೀನು ಕುರುಬನಾಗು! ನಾನು ಕುರುಬತಿಯಾಗುವೆನು!" ಎಂದು ಹೇಳುತ್ತಾ ಮಲ್ಲಿಗೆ ಗೊಳ್ಳನೆ ನಕ್ಕಳು.

ತಂಗಿಯ ನುಡಿಗೇಳಿ ಹೂವಯ್ಯನಿಗೂ ನಗುಬಂತು. ಅವರು ಆ ಕುರುಬರ ಗುಡಿಸಲನ್ನು ಕೊಂಡುಕೊಳ್ಳಲು ನಿರ್ಧರಿಸಿದರು.

ಹೂವಯ್ಯ ಕುರಿಗಾಹಿಯೊಡನೆ, ಅವನ ಗುಡಿಸಲಿನ ಮಾರಾಟದ ವಿಷಯ ಪ್ರಸ್ತಾವಿಸಿದ. ಹೂವಯ್ಯ ಹೇಳಿದ ಬೆಲೆ ಕುರುಬನಿಗೆ ಆಕರ್ಷಕ ವಾಗಿ ತೋರಿತು. ಅವನು ಸಂತೋಷದಿಂದ ತನ್ನ ಗುಡಿಸಲನ್ನೂ ರೊಪ್ಪನ್ನೂ ಹೂವಯ್ಯನಿಗೆ ಮಾರಲೊಪ್ಪಿದ. ಗುಡಿಸಲನ್ನು ಕೊಂಡುಕೊಳ್ಳಲಿರುವ ಗಿರಾಕಿ ಮನೆಬಾಗಿಲಿಗೆ ಬಂದುದನ್ನು ಕಂಡು ಅವನಿಗೆ ವಿಶೇಷ ಸಂತೋಷ ವಾಯಿತು. ಹೂವಯ್ಯ ಹೇಳಿದ ಬೆಲೆಗೆ ಅವನು ಗುಡಿಸಲನ್ನು ಮಾರಿದ.

ಹೂವಯ್ಯ ಹಿಂದಿನ ದಿನ ತಮ್ಮನ್ನು ಕುರುಬನ ಗುಡಿಸಲಿಗೆ ಕರೆದು ಕೊಂಡು ಬಂದ ಆಳು ಕರಿಯನನ್ನು ಸಂಬಳಕೊಟ್ಟು ತಮ್ಮ ಊಳಿಗಕ್ಕೆ ಇರಿಸಿಕೊಂಡ. ಆ ಗುಡಿಸಲು ರೊಪ್ಪಗಳು ಅವರಿಗೆ ಸೇರಿದವುಗಳಾದುವು. ಹೀಗೆ ಅವರು ಕುರಿಗಳನ್ನು ಸಾಕುವ ಕುರುಬರಾದರು.

---

## ಹತ್ತು

ಮಾತ್ಸರ್ಯ ವಿದ್ವೇಷಗಳ ಆಗರವೆನಿಸಿದ ತನ್ನ ಅಣ್ಣನಿಂದ ಬಿಡುಗಡೆ ಹೊಂದಲೆಂದು ಸ್ವಗೃಹವನ್ನು ತೊರೆದ ಅಪ್ಪಾಜಿ ಆಶ್ರಯವನ್ನು ಅರಸುತ್ತಾ ಸೇರಿದುದು ಹುದುಗೂರು ಕಾಡನ್ನೇ ಆಗಿದ್ದಿತು. ಅವನ ಬೆನ್ನಹಿಂದೆ ನಂಬುಗೆಯ ಆಳು ನರಸಜ್ಜ ನೆರಳಿನಂತೆ ಇದ್ದ. ಹೂಪಯ್ಯ ಪಲ್ಲಿಗೆಯರಿಗೆ ಒದಗಿದ, ಹಸಿವು ನೀರಡಿಕೆಗಳ ವಿಪತ್ತು ಅಪ್ಪಾಜಿ ನರಸಜ್ಜರಿಗೆ ಇದಿರಾಯಿತು. ಅವರು ಹುದುಗೂರು ಅಡವಿಯನ್ನು ಪ್ರವೇಶಿಸುತ್ತಲೇ, ಅವರಿಗೆ ಆಹಾರ ದೊರೆಯ ದಾಯಿತು. ಬಳಲಿದ ವೈಕೈಗಳ ದಣಿವನ್ನು ಆರಿಸಲು ವಿಶ್ರಾಮಸ್ಥಾನಗಳು ದೊರೆಯದಾದುವು. ಅರಣ್ಯಸಂಚಾರದಿಂದ ಅವರ ಕಾಲುಗಳು ಬಳಲಿ ಬೀಗಿ ದುವು. ಮುದುಕ ನರಸಜ್ಜನ ದೇಹದಲ್ಲಿ ಅರಣ್ಯದ ಕಷ್ಟನಿಷ್ಠುರಗಳನ್ನು ತಾಳಿಕೊಳ್ಳುವ ಚೇತನವಿರಲಿಲ್ಲ. ಆದುದರಿಂದ ಅವನು ಬಹಳ ಕಂಗಾಲಾದ. ಅವನು ಕಾಡುಹಾದಿಯಲ್ಲಿ ಅಡಿಗಳನ್ನು ಮುಂದೆ ಇರಿಸದಾದ.

ತನ್ನ ನಚ್ಚಿನ ಧನಿಯ ಸೇವೆ ಉಪಚಾರಗಳಿಗೆ ನೆರವಾಗುವುದರ ಬದಲು ತಾನು ಆತನಿಗೊಂದು ಹೊರೆಯಾಗಿ ಪರಿಣಮಿಸುತ್ತಿದ್ದೆನೆಂಬುದು ನರಸಜ್ಜನಿಗೆ ಅರಿವಾಯಿತು. ಆದುದರಿಂದ ತಾನು ಕಾಡಿನಲ್ಲಿ ಜೀವತೊರೆದು ಯಜಮಾನನ ಹೆಗಲಮೇಲಿನ ಹೊರೆಯನ್ನು ಇಳಿಸುವುದು ಲೇಸೆನಿಸಿತು. ಅವನು ಮುಂದಡಿ ಯಿಡದೆ ಒಂದು ಮರದಡಿಯಲ್ಲಿ ಒರಗಿದ.

"ನರಸಜ್ಜ, ಹತ್ತುಮಾರು ಮುಂದೆ ಹೋಗುವ." ಮುದುಕ ಮರದಡಿ ಯಲ್ಲಿ ಮಲಗಿದುದನ್ನು ಕಂಡು ಅಪ್ಪಾಜಿ ಹೇಳಿದ.

"ಸಮೀಪದಲ್ಲಿಯೇ ಕಳಿತ ಹಣ್ಣುಗಳು ತೂಗುತ್ತಿರುವ ಮರ ದೊರಕ ಬಹುದು. ಅಜ್ಜ, ಕಳೆದ ನಾಲ್ಕೈದು ದಿನಗಳಿಂದ ನಾವು ಮುನಿವೃತ್ತಿಯನ್ನು ಕೈಕೊಂಡಿದ್ದೇವೆ. ನನ್ನನ್ನು ಹಿಂಬಾಲಿಸಿದುದರಿಂದ ನಿನ್ನ ಪಾಲಿಗೆ ದೊರಕಿದ ಭಾಗ್ಯ ಇದು!"

"ನನ್ನ ದೊರೆ, ನಾನಿನ್ನು ನಡೆಯಲಾರೆ." ಸಂಕಟಸ್ವರದಲ್ಲಿ ನರಸಜ್ಜ ಹೇಳಿದ. "ನಾನು ಹಸಿವೆಯಿಂದ ಸಾಯುತ್ತಿದ್ದೇನೆ. ನನ್ನನ್ನು ಇಲ್ಲಿಯೇ ಬಿಟ್ಟು ನೀವು ಮುಂದೆ ಹೋಗಿ. ಸಾವಿನ ನಾಡಿನಲ್ಲಿ ಒಂದು ಕಾಲನ್ನು ಇರಿಸಿದ ಈ ಮುದುಕನಿಂದ ನಿಮಗೆ ತೊಂದರೆಯಲ್ಲದೆ ಪ್ರಯೋಜನವೇನಿಲ್ಲ. ನಾನು

ನಿಮಗೊಂದು ಹೊರೆಯಾಗಲಾರೆ. ದೇವರು ನಿಮಗೆ ಒಳ್ಳೆಯದು ಮಾಡಲಿ."

ತನ್ನ ನಚ್ಚಿನ ಸೇವಕನಿಗೆ ಸಂಕಟ ಪ್ರಾಪ್ತವಾದುದನ್ನು ಕಂಡು ಅಪ್ಪಾಜಿಗೆ ದುಃಖವಾಯಿತು. ತನ್ನ ಪ್ರಾಣಕ್ಕೆ ಗಂಡಾಂತರ ಒದಗಿದಾಗ ಈ ಮುದುಕ ತನ್ನ ಜೀವರಕ್ಷಣೆಗೆ ನೆರವಾದ; ತನ್ನ ಶ್ರೇಯಸ್ಸಿಗೋಸ್ಕರ ಸರ್ವಸಂಪತ್ತನ್ನೂ ತ್ಯಾಗಮಾಡಿದ; ತನ್ನ ಸೇವೆಗೈಯ್ಯಲೆಂದು ಮುದಿ ವಯಸ್ಸಿನಲ್ಲಿ ತನ್ನ ಬೆನ್ನ ಹಿಂದೆ ಕಾಡುಮೇಡುಗಳಲ್ಲಿ ಅಲೆದಾಡಿದ. ಇಂತಹ ಸ್ವಾಮಿಭಕ್ತ ಭೃತ್ಯನನ್ನು ಕಾಡಿನಲ್ಲಿ ಏಕಾಂಗಿಯಾಗಿ ನರಿತೋಳಗಳಿಗೆ ಆಹಾರವಾಗಿ ಬಿಟ್ಟುಹೋಗಲು, ಅಪ್ಪಾಜಿಯ ಅಂತಃಕರಣ ಒಪ್ಪದಾಯಿತು.

"ನರಸಜ್ಜ, ನಿನ್ನ ಈ ಮುದಿ ಎದೆಯಲ್ಲಿ ಸ್ವಲ್ಪವೂ ಧೈರ್ಯ ಇಲ್ಲವೇ?" ಮುದುಕನನ್ನು ಸಾಂತ್ವನಗೊಳಿಸುತ್ತಾ ಅಪ್ಪಾಜಿ ಹೇಳಿದ. "ಹಸಿವೆಗಿಂತಲೂ ಹೆಚ್ಚಾಗಿ, ನಿನ್ನ ಭೀತಿಯೇ ನಿನ್ನನ್ನು ಮೃತ್ಯುವಿನ ಮನೆಗೊಯ್ಯುವುದು."

"ನನ್ನ ದೊರೆ, ನನ್ನನ್ನು ಕಾಡಿನಲ್ಲಿ ತೊರೆದುಹೋಗಿ." ನರಳುವ ಧ್ವನಿಯಲ್ಲಿ ನರಸಜ್ಜ ಉತ್ತರಿಸಿದ. "ಇನ್ನು ಮುಂದೆ ನಾನು ನಿಮ್ಮೊಡನೆ ಬರುವುದೆಂದರೆ, ನಿಮ್ಮ ಕಾಲುಗಳಿಗೆ ಕಟ್ಟಿದ ಕುಂಟೆಯಂತಾಗುವೆನು. ಈ ದೇಹ ನರಿತೋಳಗಳ ಹಸಿವೆಯನ್ನು ಹಿಂಗಿಸಲಿ. ಈ ಮುದಿ ಶರೀರದಿಂದ ಕಾಡಿನ ಜಂತುಗಳಿಗೆ ಅಷ್ಟೊಂದು ಉಪಕಾರವಾಗಲಿ."

"ನರಸಜ್ಜ, ನಿನ್ನನ್ನು ನಟ್ಟಡವಿಯಲ್ಲಿ ತೊರೆದು ಮುಂದೆ ಹೋಗಲೇ?" ಅಪ್ಪಾಜಿ ಮಾರ್ನುಡಿದ. "ಆ ಕಾರ್ಯ ನನ್ನಿಂದಾಗದು. ಒಡಹುಟ್ಟಿದ ಅಣ್ಣನು ತೋರಿಸದ ಪ್ರೀತಿ ವಿಶ್ವಾಸಗಳನ್ನು ನೀನು ನನ್ನ ಮೇಲೆ ಮಳೆಗರೆದೆ. ನನ್ನ ಹಿತಕ್ಕೋಸ್ಕರ ನಿನ್ನ ಜೀವಮಾನದ ಗಳಿಕೆಯನ್ನು ತ್ಯಾಗಮಾಡಿದೆ. ಈಗ ನಿನ್ನನ್ನು ನಡುಕಾಡಲ್ಲಿ ತೊರೆದು ಹೋಗುವಷ್ಟು ಕೃತಘ್ನ ನಾನಲ್ಲ. ಸ್ವಲ್ಪ ಧೈರ್ಯ ತಾಳು; ಅರಣ್ಯದ ದುಷ್ಟಜೀವಿಗಳನ್ನು ಸದೆದು ಕ್ಷಣದಲ್ಲಿ ನಿನಗೆ ಆಹಾರ ತರುವೆನು. ನಾನು ಮರಳಿ ಬರುವ ವರೆಗೆ, ನಿನ್ನ ಮೇಲೆರಗಲು ಹೊಂಚುಹಾಕುತ್ತಿರುವ ಸಾವನ್ನು ಮಾರುದೂರದಲ್ಲಿರಿಸು."

ಎಂದು ನುಡಿದು ಅಪ್ಪಾಜಿ ಮುದುಕನನ್ನು ಹಿಡಿದೆತ್ತಿ, ಸೊಂಪಾದ ಹುಲ್ಲಿನ ಹಾಸಿಗೆಯಲ್ಲಿ ಮಲಗಿಸಿದ. ಅವನು ಒರೆಯಿಂದ ಕರವಾಳವನ್ನು ತೆಗೆದು ಕರದಲ್ಲಿ ಹಿಡಿದುಕೊಂಡು, ಕಾಡಿನಲ್ಲಿ ಆಹಾರವನ್ನು ಅರಸಲು ಹೊರಟ.

ಅಪ್ಪಾಜಿ ನರಸಜ್ಜನನ್ನು ಮಲಗಿಸಿದ ಎಡೆ ರಾಜ್ಯಭ್ರಷ್ಟ ದೊರೆ ಗುಣ ವರ್ಮನ ನಿವಾಸಸ್ಥಾನದಿಂದ ಅನತಿ ದೂರದಲ್ಲಿದ್ದಿತು. ಆಗ ಮಧ್ಯಾಹ್ನದ ವೇಳೆಯಾದುದರಿಂದ ಅರಸನ ಪರಿವಾರದವರೆಲ್ಲ ಮಧ್ಯಾಹ್ನದ ಊಟಕ್ಕೆಂದು ಒಂದು ವಿಶಾಲ ವಟವೃಕ್ಷದ ಛಾಯೆಯಲ್ಲಿ ನೇರಿದ್ದರು. ಸೇವಕರು ಭೋಜ್ಯ ವಸ್ತುಗಳನ್ನು ಅಣಿಗೊಳಿಸುತ್ತಿದ್ದರು. ಪರಿವಾರದವರ ಮಧ್ಯದಲ್ಲಿ ದೊರೆ ಮಂಡಿಸಿದ್ದ. ಹಸುರು ಹುಲ್ಲೇ ಅವನ ಪೀಠವಾಗಿದ್ದಿತು. ಮುತ್ತುಗದ ಎಲೆಗಳೇ ಅವರ ಭೋಜನಪಾತ್ರೆಗಳಾಗಿದ್ದುವು. ಹಣ್ಣುಹಂಪಲುಗಳು, ಹುಲ್ಲೆ ಸಾರಂಗಗಳ ಮಾಂಸ ಅವರ ಭೋಜ್ಯ ವಸ್ತುಗಳಾಗಿದ್ದುವು.

ಆಹಾರ ವಸ್ತುಗಳನ್ನು ಮುತ್ತುಗದ ಎಲೆಗಳಲ್ಲಿ ಬಡಿಸಿದ ಮೇಲೆ, ಗಂಗಣ್ಣನೆಂಬಾತ "ಊಟಕ್ಕೆ ಅಣಿಯಾಗಿದೆ ಪ್ರಭೂ" ಎಂದು ದೊರೆಗೆ ಹೇಳಿದ.

"ಗೆಳೆಯರೇ, ಗಂಗಣ್ಣ ರಾಜಭೋಜನವನ್ನು ಸಿದ್ಧಗೊಳಿಸಿದ್ದಾನೆ." ದೊರೆ ನಗುತ್ತಾ ಸಂಗಡಿಗರ ಮೊಗನೋಡಿದ. "ಅವನ ರಸಕವಳವನ್ನು ಮೆಲ್ಲೋಣ."

"ಗಂಗಣ್ಣನ ರಸಕವಳದಲ್ಲಿರುವುದು ಒಂದೇ ಒಂದು ರುಚಿ." ಹಾಲಪ್ಪನ ಕೊರಳಿಂದ ಹಾಸ್ಯೋಕ್ತಿ ಹೊರಟಿತು. "ಆ ರುಚಿಯನ್ನು ಒದಗಿಸುವುದರಲ್ಲಿ ಅವನದು ನಳನ ಕೈ."

"ಆ ಸವಿಯಾವುದು?" ದೊರೆ ಕೇಳಿದ.

"ಸಪ್ಪೆ" ಎಂದು ಹಾಲಪ್ಪ ಗಂಭೀರವಾಗಿ ಹೇಳಿದ. ಅವನ ನುಡಿಗೇಳಿ ಇತರರ ಕೊರಳುಗಳಿಂದ ನಗೆಯ ಹೊನಲು ಹರಿಯಿತು.

"ನಾನೇನು ಮಾಡಲಿ?—ಈ ಕಾಡಿನಲ್ಲಿ ಉಪ್ಪು ಮೆಣಸುಗಳನ್ನು ನಾನೆ ಲ್ಲಿಂದ ತರಬೇಕು?" ಹಾಲಪ್ಪನ ಹಾಸ್ಯವನ್ನು ಕೇಳಿ ಲಜ್ಜಿತನಾದ ಗಂಗಣ್ಣ ಉಸುರಿದ.

"ಸಪ್ಪೆ ಬಾಳ್ವೆಗಿಂತಲೂ ಉಪ್ಪುನೀರು ಲೇಸು ಎಂದು ಯಾವನೋ ಒಬ್ಬ ಪುಣ್ಯಾತ್ಮ ಹೇಳಿದ್ದಾನೆ." ದೊರೆ ಹೇಳಿದ. "ಇಲ್ಲಿ ನಮ್ಮ ಊಟವೇ ಸಪ್ಪೆ ಯಾಗಿದೆ. ಇನ್ನು ಬದುಕಿನಲ್ಲಿ ಸವಿಯೆಂತು ಒದಗಬೇಕು. ನನ್ನನ್ನು ನಚ್ಚಿ ಕಾಡಿಗೆ ಬಂದುದರಿಂದ ನಿಮಗೆ ಸಪ್ಪೆಗೂಳೇ ಗತಿಯಾಯಿತು."

"ಪ್ರಭುವಿನ ಮಾತು ಊಟದಲ್ಲಿರುವ ಸಪ್ಪೆಯನ್ನು ಇಲ್ಲವಾಗಿಸುವುದು." ಎಂದು ಒಬ್ಬ ಹೇಳಿದ.

ಅವರಿನ್ನೇನು ತುತ್ತುಗಳನ್ನು ತೆಗೆದುಕೊಳ್ಳಲು ಎಲೆಗಳಿಗೆ ಕೈಹಾಕ ಬೇಕು. ಅನಿತರಲ್ಲಿ, "ಆಹಾರವನ್ನು ಮುಟ್ಟದಿರಿ; ಉಣ್ಣದಿರಿ. ನನ್ನ ಮಾತು ಕೇಳದೆ ಉಂಡಿರಾದರೆ ನಿಮ್ಮ ಎದೆಗಳನ್ನು ಸೀಳಿಹಾಕುವೆನು!" ಎಂಬ ಗರ್ಜನೆ ಗಾಳಿಯಲ್ಲಿ ಹರಿದುಬಂದಿತು.

ಅರಸನ ಪರಿವಾರದವರು ಎಲೆಗಳಿಗೆ ಚಾಚಿದ ಕೈಗಳನ್ನು ಎಳೆದು ಕೊಂಡರು. ಈ ಅನಿರೀಕ್ಷಿತ ಧ್ವನಿಯನ್ನು ಕೇಳಿ ಅವರಿಗೆ ವಿಸ್ಮಯವಾಯಿತು. ಅವರು ಎಲೆಗಳಿಂದ ಕಣ್ಣುಗಳನ್ನೆತ್ತಿ ನೋಡಿದರು. ಹತ್ತಿಪ್ಪತ್ತು ಮಾರು ಗಳಾಚೆ,—ಪೊದೆಗಳ ಸಂದಿನಿಂದ ಒಬ್ಬ ತರುಣ ಕೈಯಲ್ಲಿ ಖಡ್ಗವನ್ನು ಜಳಪಿ ಸುತ್ತಾ ಬರುವುದು ಅವರ ಕಣ್ಣುಗಳಲ್ಲಿ ಬಿದ್ದಿತು.

"ಇದು ಯಾವ ಮೃಗ!" ವಿಸ್ಮಯದಿಂದ ಹಾಲಣ್ಣ ಪ್ರಶ್ನಿಸಿದ. "ಶಿವ ಪೂಜೆಯಲ್ಲಿ ನುಗ್ಗಿದ ಕರಡಿಯಂತೆ, ನಮ್ಮ ಊಟದ ನಡುವೆ ನುಗ್ಗಿದೆ!"

"ನೀವು ಎಲೆಗಳನ್ನು ಮುಟ್ಟಕೂಡದು. ಮೊದಲು ನನ್ನ ಆವಶ್ಯಕತೆ ಪೂರೈಸಬೇಕು!" ಖಡ್ಗವನ್ನು ಹಿರಿದು ಅವರನ್ನು ಸಮೀಪಿಸಿದ ಅಪ್ಪಾಜಿ ಒದರಿದ.

"ಇವನು ಯಾವ ಉತ್ತರಕುಮಾರ!" ಗಂಗಣ್ಣನ ಕೊರಳಿಂದ ಅಣಕ ಸ್ವರ ಹೊರಟಿತು.

"ಎಲಾ ನೀನು ಯಾರು? ನೀನೇನಾದರೂ ಕಳ್ಳನೇ!"

"ಈಗ ನಾನು ಕಳ್ಳನೇ ಸರಿ!—ನಿಮ್ಮ ಬಾಯಿಗಳಿಂದ ತುತ್ತುಗಳನ್ನು ಕಸಿದುಕೊಳ್ಳಲು ಹೊರಟಿದ್ದೇನೆ."

"ನಿನ್ನ ಮೊಗನೋಡಿದರೆ ಕಳ್ಳನ ಹಾಗೆ ತೋರುವುದಿಲ್ಲ." ಅಪ್ಪಾಜಿಯ ಮೊಗವನ್ನು ನಿಟ್ಟಿಸುತ್ತಾ ದೊರೆ ಪ್ರಶ್ನಿಸಿದ. "ಸಂಕಟ ದುರಿತಗಳಿಗೆ ಒಳಗಾಗಿ ಈ ಬಗೆಯ ಒರಟು ವರ್ತನೆ ಕೈಗೊಂಡಿರುವೆಯಾ?"

"ನನ್ನ ಪುರಾಣ ಹೇಳುವುದರಿಂದ ಹೊಟ್ಟೆತುಂಬದು." ನಿಟ್ಟುಸಿರು ಬಿಡುತ್ತಾ ಅಪ್ಪಾಜಿ ಉಸುರಿದ.

"ನಿನ್ನಲ್ಲಿ ಸಭ್ಯ ಸಂಪ್ರದಾಯಗಳೇನೂ ತೋರುವುದಿಲ್ಲ."

"ಯಾವ ಸಭ್ಯ ಸಂಪ್ರದಾಯಗಳನ್ನೂ ನಾನು ಕಲಿಯಲಿಲ್ಲ. ಮಾತು ಗಳಿಂದ ನನ್ನ ಹಸಿವೆಯುಡಗದು. ಅತ್ತ ಸರಿಯಿರಿ, ನನಗೆ ಬೇಕಾದಷ್ಟು ಆಹಾರ ವನ್ನು ತೆಗೆದುಕೊಳ್ಳುವೆನು. ಇಲ್ಲದಿದ್ದರೆ, ನಿಮ್ಮೆಲ್ಲರ ಎದೆಗಳನ್ನು ಈ ಕರ ವಾಳದಿಂದ ಸೀಳುವೆನು."

"ಭಲಾ,— ನಮ್ಮೆಲ್ಲರ ಎದೆಗಳನ್ನು ನೀನೊಬ್ಬನೇ ಸೀಳಿ ನಮ್ಮ ಆಹಾರವನ್ನು ಕಸಿದುಕೊಳ್ಳುವೆಯಾ? ನಿನ್ನ ಪೌರುಷವನ್ನು ಮೆಚ್ಚಿದೆನು!" ಗುಣವರ್ಮನ ತುಟಿಗಳಿಂದ ನಗು ಹೊಮ್ಮಿತು "ಆದರೆ ನಿನ್ನ ಈ ಭೀಷಣಕ್ಕೆ ನಾವು ಮಣಿಯೆವು. ಈ ಭಯಜನಕ ವರ್ತನೆಗಿಂತಲೂ, ಸೌಜನ್ಯಪೂರ್ಣವಾದ ವಿನಯವರ್ತನೆ ಹೆಚ್ಚು ಫಲಪ್ರದವಾಗುವುದು. 'ಹಸಿದಿರುವೆನು, ಆಹಾರವನ್ನು ನೀಡಬೇಕು.' ಎಂಬ ಕರುಣೆಯ ಕೂಗನ್ನು ಕೇಳಿದಾಗ, ನೀನೊಬ್ಬನಲ್ಲ; ನಿನ್ನಂತಹ ಹತ್ತು ಮಂದಿಗೆ ನಾವು ಉಪವಾಸವಿದ್ದಾದರೂ ಆಹಾರವನ್ನು ಒದಗಿಸುವೆವು."

"ನಿನ್ನ ಮಾತು ನನ್ನ ಎದೆಯನ್ನು ಸೋಂಕಿತು." ಅಪ್ಪಾಜಿ ಮಾರ್ನುಡಿದ. "ನನಗೊದಗಿದ ದಾರುಣ ಸಂಕಟ, ನನ್ನಲ್ಲಿದ್ದ ಸಭ್ಯ ವರ್ತನೆಯನ್ನು ಕಳಚಿ ಹಾಕಿದೆ. ನಾನಾದರೂ ಕುಲೀನ ಕುಟುಂಬದಲ್ಲಿ ಹುಟ್ಟಿದವನು, ಸಭ್ಯತೆಯ ರೀತಿನೀತಿಗಳನ್ನು ಮೈಗೂಡಿಸಿಕೊಂಡವನು. ಆದರೆ ಹಸಿವೆ ನನ್ನ ಸಭ್ಯತೆಯನ್ನೆಲ್ಲಾ ಅಳಿಸಿದೆ. ನಿಮ್ಮನ್ನು ನಾನು ಕಳ್ಳರ ತಂಡವೆಂದು ಭಾವಿಸಿದ್ದೆ. ಆದರೆ ನೀವು ಕಳ್ಳರ ಹಾಗೆ ತೋರುವುದಿಲ್ಲ. ನೀವು ಯಾರೇ ಇರಲಿ,— ನನ್ನ ಹಸಿವೆ ಹಿಂಗುವ ಮುನ್ನ ಆಹಾರವನ್ನು ಮುಟ್ಟಿದಿರಾದರೆ ಸಾವನ್ನು ಅಪ್ಪುವಿರಿ!"

"ಹಸಿವೆಯಿಂದ ನಿನ್ನ ಬುದ್ಧಿ ಕೆಟ್ಟಹಾಗಿದೆ." ಗುಣವರ್ಮ ಉಸುರಿದ. "ನಿನಗೇನು ಬೇಕು ಹೇಳು. ನಿನ್ನ ಶಕ್ತಿಗಿಂತಲೂ ಹೆಚ್ಚು ನಿನ್ನ ವಿನಯ ನಮ್ಮನ್ನು ದಯಾರ್ದ್ರ ಹೃದಯರನ್ನಾಗಿ ಮಾಡಬಲ್ಲುದು."

"ನಾನು ಹಸಿವೆಯಿಂದ ಸಾಯುತ್ತಿರುವೆನು. ನನಗೆ ಉಣಬಡಿಸಿರಿ."

"ಬಾ ನನ್ನೊಡನೆ ಕುಳಿತುಕೋ,— ನಿನಗೆ ಸ್ವಾಗತವಿದೆ" ದೊರೆ ಗಂಗಣ್ಣನ ಕಡೆ ಕಣ್ಣು ಹೊರಳಿಸಿದ. "ಈ ಅತಿಥಿಗೆ ಒಂದು ಎಲೆಮಾಡು."

"ನೀವು ಇಷ್ಟೊಂದು ಸೌಜನ್ಯದ ಮಾತುಗಳನ್ನಾಡುವಿರಾ?" ಅಪ್ಪಾಜಿ ವಿಸ್ಮಯಭರಿತ ನೇತ್ರಗಳಿಂದ ರಾಜಪರಿವಾರವನ್ನು ನಿಟ್ಟಿಸುತ್ತಾ ಹೇಳಿದ. "ಇದು ಕಾಡು. ಅರಣ್ಯವಾಸಿಗಳೆಲ್ಲರೂ ಒರಟರಾದ ಅನಾಗರಿಕರೂ, ಸಭ್ಯಾಚಾರಗಳನ್ನು ಅರಿಯದವರೂ ಇರಬೇಕೆಂದು ಊಹಿಸಿ, ಬಲಾತ್ಕಾರದಿಂದ ಆಹಾರವನ್ನು ಕಸಿದುಕೊಳ್ಳುವ ಧೋರಣೆಯನ್ನು ಕೈಗೊಂಡೆ; ಬೇರೊಬ್ಬ ಮಾನವ ಜೀವಿಯ ದುಃಖ ಸಂಕಟಗಳನ್ನು ಕಂಡು, ನೀವು ಯಾವಾಗಲಾದರೂ ಕರುಣೆ

ಯಿಂದ ಕಂಬನಿ ಸುರಿಸಿದ್ದರೆ, ಇನ್ನು ಮುಂದೆ ವಿನಯ ನಮ್ರತೆಗಳೇ ನನ್ನ ಕೈದುಗಳಾಗಲಿ! ನಾನು ಲಜ್ಜೆಯಿಂದ ಈ ಖಡ್ಗವನ್ನು ಒರೆಯಲ್ಲಿ ಮರೆಮಾಡುವೆನು."

"ನಾವೂ ಹಿಂದೆ ಸುದಿನಗಳನ್ನು ನೋಡಿರುವೆವು. ಕಷ್ಟಸಂಕಟಗಳನ್ನು ನೋಡಿ ಕಣ್ಣೀರು ಸುರಿಸಿರುವೆವು." ಗುಣವರ್ಮ ಉಸುರಿದ. "ಬಾ, ನಮ್ಮೊಡನೆ ಕುಳಿತುಕೋ. ಸಂಕೋಚವಿಲ್ಲದೆ ನಿನ್ನ ಕ್ಷುದ್ಬಾಧೆಯನ್ನು ಪರಿಹರಿಸಿಕೊ."

"ಹಾಗಾದರೆ ಒಂದು ನಿಮಿಷ ತಾಳಿ. ತಾಯಿ ಜಿಂಕೆ ತನ್ನ ಮರಿಯನ್ನು ಕರೆತರುವಂತೆ, ನಾನು ನನ್ನ ಬೆನ್ನಹಿಂದೆ ಬಂದ ವೃದ್ಧ ಸೇವಕನನ್ನು ಕರೆತರುವೆನು. ಅವನು ಇಲ್ಲಿಯೇ ಸಮೀಪದಲ್ಲಿ ಇರುವನು. ನನ್ನ ಮೇಲಿನ ನಿರ್ವ್ಯಾಜ ಪ್ರೇಮದಿಂದ ಆತ ಈ ಮುದಿ ವಯಸ್ಸಿನಲ್ಲಿ ನನ್ನನ್ನು ಹಿಂಬಾಲಿಸಿ ನನ್ನ ಹಜ್ಜೆಗಳನ್ನು ಅನುಸರಿಸಿ ಬಂದಿರುವನು. ಅವನು ಹಸಿವೆಯಿಂದ ನಡೆಯಲಾಗದೆ ಮರದಡಿಯಲ್ಲಿ ಅಡ್ಡಾಗಿರುವನು. ಹಸಿವು ಮುಪ್ಪು ಎಂಬ ಎರಡು ದೌರ್ಬಲ್ಯಗಳು ಅವನನ್ನು ಕಾಡುತ್ತಿವೆ. ಅವನ ಹಸಿವು ತಣಿಯದ ಮುನ್ನ, ಒಂದು ತುತ್ತನ್ನಾದರೂ ನಾನು ಗಂಟಲು ಕೆಳಗೆ ಇಳಿಸಲೊಲ್ಲೆ."

"ಒಳ್ಳೆಯದು, ನೀನು ಆ ಮುದುಕನನ್ನು ಕರೆದುಕೊಂಡು ಬಾ. ನೀವು ಬರುವನಕ ನಾವು ಎಲೆಗಳನ್ನು ಮುಟ್ಟಲೊಲ್ಲೆವು,"

"ತುಂಬಾ ಉಪಕಾರವಾಯಿತು. ನಾನು ನಿಮ್ಮನ್ನು ಹೆಚ್ಚುಹೊತ್ತು ವಿಳಂಬಿಸಲಾರೆ. ಇನ್ನೊಂದು ಕ್ಷಣದಲ್ಲಿ ಬರುವೆನು."

ಎಂದು ನುಡಿದ ಅಪ್ಪಾಜಿ ದ್ರುಮಚ್ಛಾಯೆಯಲ್ಲಿ ಹಸಿವು ದಣಿವುಗಳಿಂದ ಕಂಗಾಲಾಗಿ ಮಲಗಿದ್ದ ನರಸಜ್ಜನನ್ನು ಕರೆತರಲು ಹೋದ.

"ನೋಡಿ, ಈ ಪ್ರಪಂಚದಲ್ಲಿ ನಾವು ಮಾತ್ರವಲ್ಲ ಶೋಕಸಂಕಟಗ್ರಸ್ತರಾಗಿರುವುದು. ನಮ್ಮಂತೆಯೇ ದುರ್ವಿಧಿಯ ಕೋಪದೃಷ್ಟಿಗೆ ಒಳಗಾದ ಎಷ್ಟೋ ಜನರಿರುವರು." ಸುತ್ತಲಿರುವ ಪರಿವಾರದವರನ್ನು ನಿಟ್ಟಿಸುತ್ತಾ ದೊರೆ ನುಡಿದ. "ಈ ಜಗತ್ತು ವಿಶಾಲವಾದ ಒಂದು ಮಹಾ ರಂಗಭೂಮಿ. ಈ ರಂಗಭೂಮಿಯ ಮೇಲೆ ನಾವು ವಹಿಸಿದ ಭೂಮಿಕೆಗಳಿಗಿಂತೂ ಶೋಕಮಯವಾದ ಎಷ್ಟೋ ಪಾತ್ರಗಳು ಪ್ರದರ್ಶಿಸಲ್ಪಡುತ್ತಿವೆ."

"ಇಡೀ ಪ್ರಪಂಚವೇ ಒಂದು ಮಹಾರಂಗಭೂಮಿ!" ವೇದಾಂತಿಯಂತೆ ಗಂಗಣ್ಣ ಉಸುರತೊಡಗಿದ. "ಈ ರಂಗಭೂಮಿಯಲ್ಲಿ ನರನಾರಿಯರು ದೈವ

ವೆಂಬ ಸೂತ್ರಧಾರನು ಒದಗಿಸಿದ ಭೂಮಿಕೆಗಳನ್ನು ವಹಿಸಿ ಅಭಿನಯಿಸುತ್ತಿರುವರು. ಆ ಮಹಾ ಸೂತ್ರಧಾರನ ಇಚ್ಛೆಯಂತೆ ಮಾನವನೆಂಬ ನಟನು ರಂಗದಲ್ಲಿ ಪ್ರವೇಶಿಸುವನು; ನಿರ್ಗಮಿಸುವನು. ಮಾನವನು ತನ್ನ ಜೀವಮಾನದಲ್ಲಿ ಹಲವು ಪಾತ್ರಗಳನ್ನು ಅಭಿನಯಿಸುವನು. ಅವನ ಬಾಳು ಏಳಂಕಗಳ ಒಂದು ಮಹಾನಾಟಕವಾಗಿದೆ. ಬೆಕ್ಕಿನಂತೆ ಮ್ಯಾವ್ ಎಂದು ಅರಚುತ್ತಾ, ಸಿಂಬಳವನ್ನು ಮೂಗಿನಿಂದ ಸುರಿಸುತ್ತಾ ಹರಿದಾಡಲಾಗದ ಹಸುಳೆಯಾಗಿ ಅವನು ಮೊದಲನೆಯ ಅಂಕದಲ್ಲಿ ರಂಗದಮೇಲೆ ಬರುವನು. ಎರಡನೆಯ ಅಂಕದಲ್ಲಿ ಅವನು ಐಗಳ ಮಠಕ್ಕೆ ಓದುಕಲಿಯಲು ಅಡಿಗಳನ್ನಿರಿಸುತ್ತಿರುವ ಹುಡುಗನಾಗಿರುವನು. ಅವನ ಬೆನ್ನಮೇಲೆ ಹಲಗೆಹೊತ್ತಗೆಗಳು ತುಂಬಿದ ಸಂಚಿಯಿರುವುದು. ಮೊಗ ಬಾಲಸೂರ್ಯನಂತೆ ಕಳೆಗೊಂಡಿರುವುದು. ಆಟಗಳನ್ನು ಬಿಟ್ಟು ಮಠಕ್ಕೆ ಹೋಗಲು ಮನವಿಲ್ಲದೆ ಬಸವನಹುಳ ಸರಿಯುವಂತೆ ನಿಧಾನವಾಗಿ ಅಡಿಗಳನ್ನು ಇರಿಸುತ್ತಿರುವನು. ಮೂರನೆಯ ಅಂಕದಲ್ಲಿ ಅವನು ತುಟಿಗಳ ಮೇಲೆ ಮೀಸೆಮೊಳೆತ ತರುಣನಾಗಿ ಪ್ರವೇಶಿಸುವನು. ಅವನು ತನ್ನ ಎದೆಯನ್ನು ಕದ್ದ ತರುಣಿಯನ್ನು ನೆನೆದು ರಾತ್ರಿ ನಿದ್ದೆಗೆಡುವನು. ಅವನ ಎದೆಯಿಂದ ಕಮ್ಮಾರನ ತಿದಿಯಂತೆ ಬಿಸಿಯುಸಿರುಗಳು ಹೊರಸೂಸುವುವು. ಒಲವಿನ ಕನ್ನೆಯ ಕಡೆಗಣ್ಣ ನೋಟದ ಅನುಗ್ರಹ ಪಡೆಯಲೆಂದು ಪ್ರೇಮಗೀತೆಗಳನ್ನು ರಚಿಸುವನು. ಮುಂದಿನ ಅಂಕದಲ್ಲಿ ಅವನು ವೀರಯೋಧನಾಗುವನು; ಅವನು ಸೋಜಿಗದ ಪಣಗಳನ್ನು ಒಡ್ಡುವನು. ಗೌರವಯಶಸ್ಸುಗಳನ್ನು ಗಳಿಸುವ ವಿಚಾರದಲ್ಲಿ ಅವನ ಎದೆಯಲ್ಲಿ ಯಾವಾಗಲೂ ಮಾತ್ಸರ್ಯಾಗ್ನಿ ಹೊಗೆಯಾಡುತ್ತಿರುವುದು. ಕೀರ್ತಿಯೆಂಬ ಮೃಗಮರೀಚಿಕೆಯನ್ನು ಹೊಂದಲೆಂದು ತೋಪುಗಳ ಬಾಯೊಳಗೆ ನುಗ್ಗಲು ಅವನು ಅದಟಿನಿಂದ ಅಣಿಯಾಗುವನು. ಐದನೆಯ ಅಂಕದಲ್ಲಿ ಅವನು ಊರಿನ ನ್ಯಾಯಾಧಿಕಾರಿಯಾಗುವನು. ಜನ ತಂದುಕೊಟ್ಟ ಲಂಚಗಳನ್ನುಂಡುದರಿಂದ ಅವನ ಹೊಟ್ಟೆ ಊದಿ ಕುಂಬಳಕಾಯಿಯಾಗುವುದು. ಅವನ ತುಟಿಗಳು ಯಾವಾಗಲೂ ನೀತಿವಾಕ್ಯಗಳನ್ನೂ, ಜಾಣ್ನುಡಿಗಳನ್ನೂ ಹೊರ ಚೆಲ್ಲುತ್ತಿರುವುವು. ಆರನೆಯ ಅಂಕದಲ್ಲಿ ಅವನೊಬ್ಬ ಮುದಿಯನಾಗುವನು. ಕನ್ನಡಕ ಮೂಗಿನ ಮೇಲೇರುವುದು. ಕೈಕಾಲುಗಳು ತ್ರಾಣವಿಲ್ಲದೆ ಕಂಪಿಸುವುವು. ಕೆನ್ನೆಗಳು ಗುಳಿಬೀಳುವುವು. ಮೊಗದ ಚರ್ಮ ಸುಕ್ಕುಗಟ್ಟುವುದು. ಕಣ್ಣುಗಳು

ಕಾಂತಿಶೂನ್ಯವಾಗುವುವು. ಅಡಿಗಳನ್ನಿಡಲು ಊರುಗೋಲಿನ ನೆರವು ಬೇಕಾಗುವುದು. ಕೊನೆಯುಂಕದಲ್ಲಿ ಅವನು ಇನ್ನೊನ್ಮ್ಮೆ ಮಗುವಾಗಿ ರಂಗದಲ್ಲಿ ಪ್ರವೇಶಿಸುವನು. ಬಾಯಲ್ಲಿ ಹಲ್ಲಿಲ್ಲ; ಕಣ್ಣುಗಳಲ್ಲಿ ದೃಷ್ಟಿಯಿಲ್ಲ; ನಾಲಗೆಗೆ ರುಚಿಯಿಲ್ಲ; ಬಾಯಿಯಿಂದ ಮಾತು ಹೊರಡುವುದಿಲ್ಲ. ಕೊನೆಗೆ ಅವನು ಎಲ್ಲ ಶಕ್ತಿಗಳನ್ನೂ ಕಳೆದುಕೊಂಡು ಸರ್ವಶೂನ್ಯತೆಯಲ್ಲಿ ಬೆರೆತು ಹೋಗುವನು."

ಗಂಗಣ್ಣನ ಮಾತು ಮುಗಿಯುವನಿತರಲ್ಲಿ ಅಪ್ಪಾಜಿ ಹೆಗಲಮೇಲೆ ನರಸಜ್ಜನನ್ನು ಹೊತ್ತುಕೊಂಡು ಬಂದ. ಅರಸನ ಸಂಗಡಿಗರು ಅವನಿಗೊಂದು ಎಡೆಮಾಡಿಕೊಟ್ಟರು. ದೊರೆ, "ಅಜ್ಜ ನೀನು ಸಂಕೋಚವಿಲ್ಲದೆ, ನಮ್ಮ ಈ ಕಾಡುವಸ್ತುಗಳ ಉಣಿಸಿನಲ್ಲಿ ಪಾಲುಗಾರನಾಗಿ ನಿನ್ನ ಹಸಿವೆಯನ್ನು ಪರಿಹರಿಸಿಕೋ" ಎಂದು ನುಡಿದ.

ಎಲ್ಲರೂ ತಮ್ಮ ಮುಂದಿದ್ದ ತಿನಸುಗಳನ್ನು ಮೆದ್ದು ಹಸಿವೆಯನ್ನು ಪರಿಹರಿಸಿಕೊಂಡರು. ಒಡಲೊಳಗೆ ಆಹಾರ ಸೇರಲು ನರಸಜ್ಜನ ದೇಹದಲ್ಲಿ ಶಕ್ತಿ ಸಂಚರಿಸತೊಡಗಿತು. ಅಪ್ಪಾಜಿಯು ಬಳಲಿಕೆ ಪರಿಹಾರವಾಯಿತು. ಅತಿಥಿಗಳು ದಣಿವು ಆರಿಸಿಕೊಂಡ ಅನಂತರ ದೊರೆ ಆಗಂತುಕರ ಪರಿಚಯವನ್ನು ಗಳಿಸಲು ಉತ್ಸುಕನಾಗಿ, "ನೀವು ಯಾರು?—ಎಲ್ಲಿಂದ ಈ ಕಾಡಿಗೆ ಬಂದಿರಿ?" ಎಂದು ಪ್ರಶ್ನಿಸಿದ.

"ನಾನು ಮಾಲೂರು ರಾಚಯ್ಯನ ಕೊನೆಯ ಮಗ ಅಪ್ಪಾಜಿ. ಈತ ನಮ್ಮ ಕುಟುಂಬದ ನಂಬುಗೆಯ ಆಳು ನರಸಜ್ಜ." ಎಂದು ಹೇಳಿ ಅಪ್ಪಾಜಿ ತನ್ನ ದುಃಖಮಯ ಜೀವನಕಥೆಯನ್ನು ದೊರೆಗೆ ಅರುಹಿದ.

"ನೀನು ನನ್ನ ಹಳೆಯ ಗೆಳೆಯ ಮಾಲೂರು ರಾಚಯ್ಯನ ಪುತ್ರನಾದರೆ ನಿನಗೆ ಸುಸ್ವಾಗತವಿದೆ." ಎಂದು ನುಡಿದ ಗುಣವರ್ಮ ತೋಳುಗಳನ್ನು ಚಾಚಿ ಅಪ್ಪಾಜಿಯನ್ನು ಆಲಿಂಗಿಸಿದ. "ನಿನ್ನ ಮುಖವೇ ನೀನು ಮಾಲೂರು ರಾಚಯ್ಯನ ಪುತ್ರನೆಂಬುದನ್ನು ಅರುಹುತ್ತಿರುವುದು. ನಾನೇ ಪದಚ್ಯುತ ದೊರೆ ಗುಣವರ್ಮ. ಈಗ ವನರಾಜ್ಯವನ್ನು ಆಳುತ್ತಿರುವೆನು. ಇವರೆ ನನ್ನ ಆಸ್ಥಾನಿಗರು. ರಾಚಯ್ಯ ನನ್ನ ರಾಜಾಸ್ಥಾನದಲ್ಲಿ ಪ್ರಮುಖನಾಗಿ ನನ್ನ ಬಲಗೈಯಂತೆ ಇದ್ದ. ಈಗ ಕಾಡೇ ನನ್ನ ನಾಡಾಗಿದೆ. ಆದರೂ ನಾನು ನನ್ನ ಹಳೆಯಮಿತ್ರನ ಮಗನನ್ನು ಮರೆಯಲಾರೆ. ನೀನೂ ನನ್ನ ಆಪ್ತವರ್ಗಕ್ಕೆ ಸೇರಿದವನಾಗಿ ನನ್ನ ಬಳಿಯಲ್ಲಿಯೇ ಇರು."

"ಪ್ರಭು, ನಿಮ್ಮ ದಯೆಗೆ ನಾನು ಕೃತಜ್ಞನಾಗಿದ್ದೇನೆ." ಅಪ್ಪಾಜಿ ದೊರೆಯ ಅಡಿಗಳಿಗೆ ಮಣಿದ. "ಹಿಂದೆ ನನ್ನ ತಂದೆ ನಿಮ್ಮ ಪಾದಸೇವೆಯನ್ನು ಗೈದಂತೆಯೇ—ಈಗ ನಾನು ಈ ವೈಯನ್ನು ನಿಮ್ಮ ಸೇವೆಗೆ ವಿನಾಸಲಾಗಿಸುವೆನು."

"ಅಜ್ಜ, ನಿನ್ನ ಧನಿಯಂತೆ—ನಿನಗೂ ಇಲ್ಲಿ ಸುಸ್ವಾಗತವಿದೆ." ದೊರೆ ನರಸಜ್ಜನ ಕಡೆಗೆ ಕಣ್ಣುಗಳನ್ನು ಹೊರಳಿಸಿದ. "ನೀನು ಬಹಳ ದಣಿದಿದ್ದೀಯೆ—ಜನರು ನಿನಗೆ ನನ್ನ ಗವಿಯನ್ನು ತೋರಿಸಿಕೊಡುವರು. ಅಲ್ಲಿ ಮಲಗಿ ದಣಿವಾರಿಸಿಕೋ."

ಅಪ್ಪಾಜಿ ಅಂದಿನಿಂದ ಗುಣವರ್ಮನ ವಿಶ್ವಸ್ತಮಿತ್ರರಲ್ಲೊಬ್ಬನಾಗಿ ದೊರೆಯ ಸಂಗಡ ಅರಣ್ಯದಲ್ಲಿ ವಾಸಿಸತೊಡಗಿದ.

---

## ಹನ್ನೊಂದು

ಹುದುಗೂರು ಕಾನನವನ್ನೇ ತನ್ನ ನಿವಾಸಸ್ಥಾನವನ್ನಾಗಿ ಮಾಡಿಕೊಂಡು ರಾಜ್ಯಭ್ರಷ್ಟ ದೊರೆ ಗುಣವರ್ಮನ ಅಭಯ ಹಸ್ತದ ನೆರಳಿನಲ್ಲಿ ರಕ್ಷಣೆಹೊಂದಿದ ಅಪ್ಪಾಜಿಯ ಮನಸ್ಸು ಚಿಂತೆಯ ಮೋಡಗಳಿಲ್ಲದೆ ತಿಳಿ ಬಾನಿನಂತಾಗಲಿಲ್ಲ. ಕುಡಿಗಳನ್ನೊಡೆದು ನಾಲ್ದೆಸೆಗಳಿಗೆ ಪಸರಿಸುವ ಮಲ್ಲಿಗೆಯ ಬಳ್ಳಿಯಂತೆ,—ಚಿಂತೆಯೊಂದು ಅವನ ಮನಸ್ಸನ್ನು ಮುಸುಕಿತು. ಮಲ್ಲಯುದ್ಧದಲ್ಲಿ ಭಾಗವಹಿಸಲೆಂದು ರಾಜಾಸ್ಥಾನಕ್ಕೆ ತೆರಳಿದಾಗ ತಾನುಕಂಡ ನೀಲಾಂಬಿಕೆಯ ಚೆಲುಮೊಗವನ್ನು ಅವನು ವಿಸ್ಮರಿಸದಾದ. ದಯೆ ನಿರ್ವಂಚನೆಗಳಿಂದ ತುಂಬಿದ ಆ ಕಣ್ಣುಗಳ ಬೆಳಕು ಅವನ ಮುಂದೆ ಸುಳಿದಾಡುವಂತೆ ಭಾಸವಾಯಿತು. "ನನ್ನ ಈ ಬಲಹೀನ ಶರೀರದಲ್ಲಿರುವ ಅಲ್ಪಶಕ್ತಿ ನಿನ್ನ ನೆರವಿಗಿರಲೆಂದು ಹಾರೈಸುವೆನು." ಎಂಬ ಆ ಇನಿದನಿ ಅವನ ಕಿವಿಗಳಲ್ಲಿ ಮಾರುಲಿಗೊಡತೊಡಗಿತು. ಆಕೆ ತನ್ನ ನೆನಪಿಗೆಂದು ತೆಗೆದಿತ್ತ ರತ್ನಹಾರ ಅವನ ಕೊರಳಲ್ಲಿ ಬೆಳಗುತ್ತಿದ್ದಿತು. ಹೃದಯದಲ್ಲಿ ನೆಲಸಿರುವ ಮನದನ್ನೆಯ ಪ್ರತೀಕದಂತೆ,—ರತ್ನಹಾರ ಅವನ ಎದೆಯಮೇಲೆ ವಿರಾಜಿಸುತ್ತಿದ್ದಿತು.

ಅಪ್ಪಾಜಿ ಅನೇಕ ಸಲ ಕೊರಳಿಂದ ರತ್ನಹಾರವನ್ನು ತೆಗೆದುನೋಡು ವನು. ಅದನ್ನೇ ದಿಟ್ಟಿಸುವನು. ಧವಳರಶ್ಮಿಗಳನ್ನು ಹೊರಚೆಲ್ಲುವ ಆ ದಿವ್ಯ ರತ್ನಗಳಲ್ಲಿ ನೀಲಾಂಬಿಕೆಯ ಪ್ರತಿಬಿಂಬವನ್ನು ನೋಡುವನು. ಅವನ ನಾಲಗೆ "ನೀಲಾಂಬಿಕೆ ನೀಲಾಂಬಿಕೆ" ಎಂದು ಆಕೆಯ ಮುದ್ದು ಹೆಸರನ್ನು ಜಪಿಸು ವುದು. ನೀಲಾಂಬಿಕೆಯ ಸೌಂದರ್ಯ ಸೌಜನ್ಯಗಳನ್ನು ಬಣ್ಣಿಸಲೆಂದು ಅವನು ಅನೇಕ ಹಾಡುಗಳನ್ನು ಕಟ್ಟಿ ಹಾಡುವನು. ಅವನು ಅಂಬಿನ ತುದಿಯಿಂದ ತಾಳೆಯ ಓಲೆಗಳ ಮೇಲೆ ತಾನು ಕಟ್ಟಿದ ಹಾಡುಗಳನ್ನು ಬರೆಯುವನು; ಅವುಗಳನ್ನು ಗಿಡಗಳ ಟೊಂಗೆಗಳಿಗೆ ನೇತುಹಾಕುವನು.

ಈ ಕಾರ್ಯಗಳಿಂದ ಅಪ್ಪಾಜಿಯ ಆತ್ಮಕ್ಕೆ ತೃಪ್ತಿಯಾಗುತ್ತಿರಲಿಲ್ಲ. ಈ ಹಾಡುಗಳು ತನ್ನ ಅವಿನಾಶಿಯಾದ ದಿವ್ಯಪ್ರೇಮವನ್ನು ಸದಾಕಾಲ ಅರಣ್ಯದಲ್ಲಿ ಸಾರುತ್ತಿರಬೇಕೆಂಬುದು ಅವನ ಆಲೋಚನೆ. ಆದರೆ ಹಾಳುಗಾಳಿ ಈ ಪ್ರೇಮ ಗೀತೆಗಳನ್ನು ಬರೆದ ತಾಳೆಯೋಲೆಗಳನ್ನು ಗಿಡದಕೊಂಬೆಗಳಿಂದ ಕಿತ್ತುಹಾಕ ಬಹುದು. ಈ ತರುಣನಿಗೆ ಕೊನೆಗೊಂದು ಉಪಾಯ ಹೊಳೆಯಿತು. "ಉನ್ನತ ವೃಕ್ಷಗಳು ಕಾಡಿನಲ್ಲೆಲ್ಲಾ ಬೆಳೆದುನಿಂತಿವೆ. ತಾನೇಕೆ ಈ ಮರಗಳ ತೊಗಟೆಯ ಮೇಲೆ ಪ್ರೇಮಗೀತೆಗಳನ್ನು ಕೆತ್ತಬಾರದು? ಗಾಳಿ ಅವುಗಳನ್ನು ಕಿತ್ತುಹಾಕದು. ಮಳೆ, ಮಂಜು ಇಬ್ಬನಿಗಳು ಅವುಗಳನ್ನು ತೋಯಿಸವು. ಆ ಪ್ರೇಮಗೀತೆಗಳು ಚಿರಕಾಲ ಉಳಿಯಬಲ್ಲವು" ಎಂಬ ಆಲೋಚನೆ ಅವನ ಚಿತ್ತದಲ್ಲಿ ಉದಯಿಸಿತು. ಈ ಆಲೋಚನೆ ಅಪ್ಪಾಜಿಗೆ ನವೋತ್ಸಾಹವನ್ನು ನೀಡಿತು. ಅವನು "ನೀಲಾಂಬಿಕೆ, ಬೆಳೆದುನಿಂತ ಹೆಮ್ಮರಗಳ ತೊಗಟೆಗಳೇ ನನ್ನ ತಾಳೆಯೋಲೆಗಳು. ಅವುಗಳ ಮೇಲೆ ನನ್ನ ಹೃದಯಾಂತರಾಳದಲ್ಲಿ ಮಿನುಗುವ ದಿವ್ಯಭಾವಗಳನ್ನು ಪ್ರೇಮಗೀತೆಗಳ ರೂಪದಲ್ಲಿ ಕೆತ್ತುವೆನು. ಕಾಡಿನಲ್ಲಿ ವಾಸಿಸುವ ಪ್ರತಿಯೊಬ್ಬ ಮಾನವನ ನಾಲಗೆ ಈ ಪ್ರೇಮಗೀತೆಗಳನ್ನು ಓದಲಿ; ಅವರೆಲ್ಲ ನಿನ್ನ ಗುಣಗಳ ಮಹೋನ್ನತಿಯನ್ನು ತಿಳಿಯಲಿ." ಎಂದು ತನ್ನ ಅಂತರಂಗದಲ್ಲಿ ಉದ್ಗಾರವೆತ್ತಿದ.

ಅಂದಿನಿಂದ ಈ ಮಹಾರಣ್ಯದಲ್ಲಿ ಬೆಳೆದುನಿಂತ ಮಹಾ ದ್ರುಮಗಳ ತೊಗಟೆಯ ಮೇಲೆ ನೀಲಾಂಬಿಕೆಯ ಹೆಸರನ್ನೂ ಅವಳ ಗುಣ ವಿಶೇಷಗಳನ್ನು ಬಣ್ಣಿಸುವ ಪ್ರೇಮಗೀತೆಗಳನ್ನೂ ಕೆತ್ತುವುದು ಅಪ್ಪಾಜಿಯ ದಿನನಿತ್ಯದ ಗೈಮೆ ಯಾಯಿತು. ತನ್ನ ಕರವಾಳದ ಮೊನೆಯಿಂದ ಅವನು ಮುದ್ದಾದ ಅಕ್ಷರ

ಗಳಲ್ಲಿ ನೀಲಾಂಬಿಕೆಯ ಹೆಸರನ್ನೂ ಪ್ರೇಮಗೀತೆಗಳನ್ನೂ ಕೆತ್ತತೊಡಗಿದ. ಈ ಕಾರ್ಯವನ್ನೆಸಗುವಾಗ ಅವನ ಅಂತರಂಗ ಎಣೆಯಿಲ್ಲದ ನಲವನ್ನು ಹೊಂದುತ್ತಿದ್ದಿತು.

ಅಪ್ಪಾಜಿ ಮರಗಳ ತೊಗಟೆಯ ಮೇಲೆ ಪ್ರೇಮಗೀತೆಗಳನ್ನು ಕೆತ್ತು ತ್ತಿದ್ದಾಗ, ನೀಲಾಂಬಿಕೆ ತನ್ನಂತೆಯೇ ಹುದುಗೂರು ಅಡವಿಯನ್ನು ಸೇರಿರು ವಳು; ಅವಳು ತನ್ನಿಂದ ಅನತಿದೂರದಲ್ಲಿ ನೆಲಸಿರುವಳು ಎಂಬುದನ್ನು ಅರಿಯನು. ಆಕೆ ತನ್ನಿಂದ ಬಹುದೂರದಲ್ಲಿ ರಾಜಮಂದಿರದಲ್ಲಿ ನೆಲಸಿರುವಳು; ಆಕೆಗೆ ತನ್ನ ನೆನಪು ಸಹ ಇರದು ಎಂಬುದು ಅವನ ಭಾವನೆಯಾಗಿದ್ದಿತು.

ಒಂದು ದಿನ ಹೂವಯ್ಯ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಮರಗಳ ತೊಗಟೆಯ ಮೇಲೆ ನೀಲಾಂಬಿಕೆ ಎಂದು ಕೆತ್ತಿರುವುದನ್ನು ಕಂಡ. ಕೆಲವು ಗಿಡಗಳ ಟೊಂಗೆಗಳಲ್ಲಿ ತಾಳೆಯೋಲೆಗಳು, ತೆಳುಗಾಳಿಗೆ ಸಿಲುಕಿ ಕುಣಿದಾಡು ತ್ತಿದ್ದುವು. ಇವೇನೆಂದು ಅವನು ಆ ಓಲೆಗಳನ್ನು ಕಿತ್ತು ತೆಗೆದುನೋಡಿದ. ಅವು ಪ್ರೇಮಗೀತೆಗಳೆಂಬುದು ಅವನಿಗೆ ಅರಿವಾಯಿತು. ಆ ಗೀತೆಗಳಲ್ಲಿ ಕೆಲವು ನೀಲಾಂಬಿಕೆಯ ರೂಪಾತಿಶಯವನ್ನು ಬಣ್ಣಿಸುತ್ತಿದ್ದುವು. ಹಲವು ನೀಲಾಂಬಿಕೆಯ ಗುಣಗಳನ್ನು ಮುಕ್ತಕಂಠದಿಂದ ಹೊಗಳುತ್ತಿದ್ದುವು. ಮರ ಗಳ ತೊಗಟೆಯ ಮೇಲೆಲ್ಲಾ ನೀಲಾಂಬಿಕೆಯ ಹೆಸರುಗಳೇ ರಾಜಿಸುತ್ತಿದ್ದುವು. ಈ ಕಾರ್ಯವನ್ನು ಗೈದವರಾರೆಂದು ಹೂವಯ್ಯನಿಗೆ ಆಶ್ಚರ್ಯವಾಯಿತು.

ಮಲ್ಲಿಗೆ ಕಾಡುಹೂಗಳನ್ನು ಮಾಲೆಗಟ್ಟಿ ಅರಸಿ ತರಲೆಂದು ಕಾಡಿಗೆ ಹೋಗಿದ್ದಳು. ಅವಳೂ ಮರಗಳ ತೊಗಟೆಗಳ ಮೇಲೆ ರಾಜಿಸುತ್ತಿದ್ದ ನೀಲಾಂಬಿಕೆಯ ಹೆಸರುಗಳನ್ನು ಕಂಡಳು. ಗಿಡಗಳ ಕೊಂಬೆಗಳಲ್ಲಿ ನರ್ತಿಸು ತ್ತಿದ್ದ ತಾಳೆಯೋಲೆಗಳನ್ನು ನೋಡಿದಳು; ಆಕೆ ಅವುಗಳನ್ನು ಕಿತ್ತು ಓದಿದಾಗ ಅವು ಪ್ರಣಯ ಗೀತೆಗಳೆಂಬುದು ಅರಿವಾಯಿತು. ಅವಳಿಗೂ ಈ ಕಾರ್ಯವನ್ನು ಎಸಗಿದವರು ಯಾರೆಂದು ವಿಸ್ಮಯವಾಯಿತು. ಆತ ದೂರ ವಿರಲಾರ,—ಇಲ್ಲಿ ಸಮೀಪದಲ್ಲಿಯೇ ಇರಬೇಕು, ಎಂದು ಅವಳ ಮನಸ್ಸು ಹೇಳಿತು. ಹೂಗಳನ್ನು ಅರಸಿ ಹೆಕ್ಕುವ ಕೆಲಸದೊಡನೆ ಪ್ರಣಯಗೀತೆಗಳನ್ನು ಬರೆದ ಕವಿಯನ್ನು ಅವಳು ಕಾಡಿನಲ್ಲಿ ಹುಡುಕತೊಡಗಿದಳು. ಹೀಗೆ ಮಲ್ಲಿಗೆ ಹೂಗಳನ್ನು ಕೀಳುತ್ತಾ ಅಲೆದಾಡುವಾಗ, ಸ್ವಲ್ಪದೂರದಲ್ಲಿ ಹಾಡುವ ದನಿಗೇಳಿಸಿತು. ಹಾಡುವ ವ್ಯಕ್ತಿಯೇ ಮರದ ತೊಗಟೆಯ ಮೇಲೆ ಪ್ರೇಮಗೀತೆ

ಯನ್ನು ಕೆತ್ತಿದ ಕವಿಯಿರಬೇಕೆಂದು ಅವಳು ಊಹಿಸಿದಳು. ಅವನಾರೆಂದು ತಿಳಿಯಲು ಆಕೆ ಸದ್ದುಮಾಡದೆ ಹಜ್ಜೆಯಮೇಲೆ ಹಜ್ಜೆಯನ್ನಿರಿಸುತ್ತಾ ಆ ಹಾಡು ಹರಿದುಬರುವ ಎಡೆಗೆ ತೆರಳಿದಳು. ನೂರುಮಾರು ತೆರಳುವನಿತರಲ್ಲಿ, ಒಂದು ಮರದಡಿಯಲ್ಲಿ ತರುಣ ಮಲಗಿ, ಕೈಯಲ್ಲೊಂದು ಓಲೆಯನ್ನು ಹಿಡಿದು ಮಧುರಸ್ವರದಲ್ಲಿ ಹಾಡುತ್ತಿರುವುದನ್ನು ಕಂಡಳು. ಅವಳು ಅವನಾರೆಂಬುದನ್ನು ಅರಿಯಲು ಒಂದು ಪೊದೆಯ ಮರೆಯಲ್ಲಿ ನಿಂತು ಉತ್ಸುಕತೆಯಿಂದ ನಿಟ್ಟಿಸಿ ನೋಡಿದಳು.

ಮಲ್ಲಿಗೆಗೆ ಅವನ ಗುರುತು ಹತ್ತಿತು. ಆಕೆಯ ಮೊಗದಲ್ಲಿ ಕೌತುಕ ಮೂಡಿತು. ಆತ ಬೇರೆಯಾರೂ ಆಗಿರಲಿಲ್ಲ. ಆಕೆಗೆ ಪರಿಚಿತನಾದ ಅಪ್ಪಾಜಿ ಯಾಗಿದ್ದ.

ತಾನು ತಿಳಿದ ಕೌತುಕದ ವಾರ್ತೆಯನ್ನು ಹೂವಯ್ಯನಿಗೆ ಅರುಹಲೆಂದು ಅವಳು ಮರಳಿದಳು. ತ್ವರೆಯಾಗಿ ಅವಳ ಪಾದಗಳು ಹಜ್ಜೆಗಳನ್ನಿರಿಸಿದುವು. ಅವಳ ಒಂದು ಕೈಯಲ್ಲಿ ತಾನು ಗಿಡದ ಟೊಂಗೆಯಿಂದ ತೆಗೆದ ಪ್ರೇಮಗೀತೆ ಯುಳ್ಳ ತಾಳೆಯೋಲೆಯಿದ್ದಿತು. ಮಡಿಲಲ್ಲಿ ತಾನು ಗಿಡಬಳ್ಳಿಗಳಿಂದ ಹೆಕ್ಕಿದ ಬಗೆಬಗೆಯ ಕುಸುಮಗಳಿದ್ದುವು.

ಹೂವಯ್ಯ ಈ ಪ್ರೇಮಗೀತೆಗಳನ್ನು ಬರೆದವರಾರು? ಮರಗಳ ತೊಗಟೆಯ ಮೇಲೆ ನೀಲಾಂಬಿಕೆಯ ಹೆಸರನ್ನು ಕೆತ್ತಿದವರಾರು? ಎಂದು ಆಲೋಚಿಸುತ್ತಾ ಒಂದು ಮಾವಿನ ಮರದ ನೆರಳಲ್ಲಿ ಕುಳಿತಿದ್ದ. ತಾಳೆಯೋಲೆ ಯನ್ನು ಕೈಯಲ್ಲಿ ಹಿಡಿದುಕೊಂಡು ಮಲ್ಲಿಗೆ ಅಲ್ಲಿಗೆ ಓಡಿಬಂದಳು. ಅವಳ ಹಣೆ ಮತ್ತು ಕೆನ್ನೆಗಳ ಮೇಲೆ ಬೆವರು ಹನಿಗಳು ಮೂಡಿ, ಮುತ್ತಿನ ಮಣಿ ಗಳಂತೆ ಮಿನುಗುತ್ತಿದ್ದುವು.

"ತಂಗಿ,—ಹೂಕೊಯ್ಯಲು ಹೋದ ನೀನೇಕೆ ಭಯಗೊಂಡವಳಂತೆ ಓಡಿಬರುತ್ತಿರುವೆ?" ತನ್ನೆಡೆಗೆ ಓಡಿಬಂದ ಮಲ್ಲಿಗೆಯ ಮೊಗವನ್ನು ನಿಟ್ಟಿಸುತ್ತಾ ಹೂವಯ್ಯ ಪ್ರಶ್ನಿಸಿದ. "ನಿನ್ನನ್ನು ಹುಲಿಯೇನಾದರೂ ಅಟ್ಟಿಕೊಂಡು ಬಂದಿತೇ?

"ಅಣ್ಣ,—ಹುಲಿಯೇನಾದರೂ ಅಟ್ಟಿಕೊಂಡು ಬಂದಿದ್ದರೆ, ನಾನು ಹೀಗೆ ಓಡಿಬರುತ್ತಿದ್ದೆನೆ?" ಗುಲಾಬಿ ಹೂವಿನಂತೆ ಕೆಂಪಾದ ತನ್ನ ಕೆನ್ನೆಗಳ ಮೇಲಿಂದ ಬೆವರನ್ನು ಸೀರೆಯ ಸೆರಗಿನಿಂದ ಒರಸುತ್ತಾ ಮಲ್ಲಿಗೆ ಮಾರ್ನುಡಿ

ದಳು. "ನಾನು ಹುಲಿಗಳಿಗೆ ಹೆದರಲಾರೆ. ಈ ಕಾಡಿನಲ್ಲಿ ವಾಸಮಾಡತೊಡಗಿದ ಮೇಲೆ ಹುಲಿಗಳು ಮನೆಯಲ್ಲಿ ಓಡಾಡುವ ಬೆಕ್ಕುಗಳಂತಾಗಿವೆ."

"ಹಾಗಾದರೆ, ನೀನು ಬೆದರಿದ ಎರಳೆಯಂತೆ ಏಕೆ ಓಡಿಬಂದೆ?"

"ನಾನು ಬೆದರಿ ಓಡಿಬರಲಿಲ್ಲ. ಅಣ್ಣ ಇದನ್ನು ಓದಿನೋಡು." ಮಲ್ಲಿಗೆ ಕೈಯಲ್ಲಿ ಹಿಡಿದಿದ್ದ ತಾಳೆಯೋಲೆಯನ್ನು ಹೂವಯ್ಯನ ಕೈಗೆ ಕೊಟ್ಟಳು. "ನೋಡು, ಈಗೀಗ ಹುದುಗೂರು ಅರಣ್ಯದಲ್ಲಿ ಆಶ್ಚರ್ಯಗಳು ಆಗತೊಡಗಿವೆ. ಗಿಡಗಳು ಹೂಹಣ್ಣುಗಳನ್ನು ಕೊಡುವುದರ ಬದಲು ಪ್ರೇಮಗೀತೆಗಳನ್ನು ಕೊಡತೊಡಗಿವೆ. ಮರಗಳ ಮೇಲೆಲ್ಲಾ ನೀಲಾಂಬಿಕೆಯೆಂಬ ಹೆಸರು ಕೆತ್ತಲ್ಪಟ್ಟಿದೆ. ಗಿಡಗಳ ಮೇಲೆಲ್ಲಾ ಪ್ರೇಮಗೀತೆಗಳು ಕುಣಿದಾಡುತ್ತಿವೆ. ಈ ವಿಸ್ಮಯವನ್ನು ಎಸಗಿದ ಕೈಯಾವುದು?

"ಮಲ್ಲಿಗೆ, ನಾನೂ ಅದನ್ನೇ ಆಲೋಚಿಸುತ್ತಿದ್ದೇನೆ." ಹೂವಯ್ಯ ತಂಗಿಗೆ ಮಾರ್ನುಡಿದ. "ಇಗೋ ನೋಡು, ಇಲ್ಲೊಂದು ಪ್ರಣಯಗೀತೆಯಿದೆ. ಇದು ಆ ನೇರಳೆ ಗಿಡದಲ್ಲಿ ನನಗೆ ದೊರಕಿತು. ನಾನು ನೀಲಾಂಬಿಕೆಯೆಂಬುದು, ಅರಣ್ಯವಾಸಿಗಳಲ್ಲಿ ಯಾರಿಗೂ ತಿಳಿಯದು. ನೀನೇನಾದರೂ ನನಗೆ ಚೇಷ್ಟೆ ಮಾಡಲೆಂದು ಈ ಕಾರ್ಯ ನಡಿಸಿದಿಯೇನೋ."

"ಅಯ್ಯೋ! ಅಣ್ಣ ನಿನಗೊಂದು ಹುಚ್ಚು! ಈ ಹಾಡುಗಳನ್ನು ಕಟ್ಟಲು ನಾನು ಕಬ್ಬಿಗಿತ್ತಿಯೇ? ಇನ್ನು ಮರದ ತೊಗಟೆಯ ಮೇಲೆ ಒಂದು ಅಕ್ಷರ ಕೆತ್ತಲು ನನಗೆ ಒಂದು ದಿನವಾದರೂ ಸಾಕಾಗದು.

"ನೀನು ಅಲ್ಲವಾದರೆ, ಬರೆದವರಾರೆಂಬುದು ನನ್ನ ಊಹೆಗೆ ನಿಲುಕದ ವಸ್ತು. ಅದು ಆರ್ಯಭಟ್ಟನ ಸಿದ್ಧಾಂತದಂತೆ,—ನನ್ನ ಬುದ್ಧಿಗೆ ಎಟಕದು."

"ನೀನು ಸೋಲನ್ನು ಒಪ್ಪಿಕೊಳ್ಳುವಿಯಾ?—ನಾನು ಅದು ಯಾರ ಕೈಯೆಂದು ಹೇಳುತ್ತೇನೆ."

"ಹೂಂ,—ನಾನು ಸೋತೆ. ತಂಗಿ, ನೀನು ಯಾರೆಂದು ಹೇಳು."

"ಒಂದು ಪುರುಷಹಸ್ತ ಈ ಪ್ರಣಯಗೀತೆಗಳನ್ನು ಬರೆಯಿತು.

"ಪುರುಷ ಹಸ್ತ ಈ ಗೀತೆಗಳ ಕರ್ತೃವೆಂದು ಯಾರು ಬೇಕಾದರೂ ಹೇಳಬಲ್ಲರು. ಅದೇನು ಮಹಾಕಾರ್ಯವಲ್ಲ."

"ನೀನು ಹಿಂದೆ ತೊಟ್ಟಿದ್ದ ರತ್ನಹಾರ ಯಾರ ಕೊರಳಲ್ಲಿ ಶೋಭಿಸುತ್ತಿದೆಯೋ ಆತನ ಕೈ ಈ ಗೀತೆಗಳನ್ನು ಬರೆದಿದೆ." ಮಲ್ಲಿಗೆ ಅಣ್ಣನ ಮೊಗ

ದಿಂದ ಕಣ್ಣುಗಳನ್ನು ಬೇರೆಕಡೆಗೆ ಚಲಿಸದೆ ಹೇಳಿದಳು. ಹೂವಯ್ಯನ ಮೊಗ ಕೆಂಬಣ್ಣವನ್ನು ತಳೆಯಿತು. "ಅಣ್ಣಾ, ನಿನ್ನ ಕೆನ್ನೆ ಕೆಂಗುಲಾಬಿಯ ಬಣ್ಣವನ್ನು ತಳೆದುದೇಕೆ?"

"ಬಿಸಿಲಿಗೆ ಕೆಂಪಾಯಿತೇನೋ ಅದಿರಲಿ, ಆತ ಯಾರೆಂಬುದನ್ನು ತಿಳಿಸು."

"ಬೆಟ್ಟಗಳು ಭೂಕಂಪದಿಂದ ಕುಸಿದು ಚಲನೆಯನ್ನು ಕೈಗೊಳ್ಳ ಬಹುದು. ಆದರೆ ಆತ್ಮಮಿತ್ರರು ಪರಸ್ಪರ ಭೇಟಿಯಾಗುವುದು ಅದಕ್ಕಿಂತಲೂ ಪ್ರಯಾಸ."

"ಆದರೆ ಇದು ಸಾಧ್ಯವೇ? ಎಂದು ನನ್ನ ಚಿಂತೆ? ನನಗೆ ಬಹು ಸೋಜಿಗವಾಗಿ ತೋರುತ್ತಿದೆ."

"ಕನಸಿನ ಕಲ್ಪನೆಗೂ ಮೀರಿದ ಸಂಗತಿ. ಯಥಾರ್ಥವಾಗಿ ಪರಿಣಮಿ ಸುವುದು ಅಪರೂಪವಲ್ಲ."

"ತಂಗಿ, ನೀನು ಹೀಗೆ ಕೊಂಕಣ ಸುತ್ತಬೇಡ." ಮಲ್ಲಿಗೆಯ ಚೇಷ್ಟೆ ಹೂವಯ್ಯನ ಕುತೂಹಲವನ್ನು ಕೆರಳಿಸಿತು. "ನೀನು ನನ್ನಿಂದ ಅಡಗಿಸಿಟ್ಟಿ ರುವ ಮನುಷ್ಯನ ಹೆಸರಾದರೂ ಒಮ್ಮೆ ನಿನ್ನ ತುಟಿಗಳಿಂದ ಹೊರಹೊಮ್ಮಲಿ. ಅಗಲಕಿರಿದಾದ ಬಾಯುಳ್ಳ ಜಾಡಿಯಿಂದ ಜೇನು ಧಾರಾಕಾರವಾಗಿ ಹರಿದು ಬರುವಂತೆ,—ಅವನ ಹೆಸರು ಮಾಹಿತಿಗಳು ನಿನ್ನ ತುಟಿಗಳಿಂದ ಹೊರಸೂಸಲಿ. ನಿನ್ನ ಜಾಡಿಯು ಬರುಡೆಯುನ್ನೊಮ್ಮೆ ತೆಗೆ. ಆ ಮಧುವನ್ನು ನಾನು ಸವಿ ಯುವೆನು."

"ಹೂಂ,—ಆ ಮನುಷ್ಯನನ್ನು ನಿನ್ನ ಹೃದಯದೊಳಗೆ ತುಂಬಿಸಿಕೊಳ್ಳುವೆ ಯಲ್ಲವೇ?"

"ಅವನ ತಲೆಗೆ, ಧರಿಸಿದ ಮುಂಡಾಸಿನ ಬೆಲೆಯಾದರೂ ಇದೆಯೇ?"

"ಅವನ ಮಂಡೆಯ ಮೇಲೆ ಮುಂಡಾಸವಿಲ್ಲ."

"ನೆತ್ತಿಗೊಂದು ಮುಂಡಾಸಕ್ಕೂ ಗತಿಯಿಲ್ಲದ ತಿರುಕನೇ ಅವನು!"

"ಅಣ್ಣಾ, ಅವನು ಬೇರೆ ಯಾರೂ ಅಲ್ಲ. ಅಪ್ಪಾಜಿ!" ಮಲ್ಲಿಗೆ ಹೂವ ಯ್ಯನ ಹೆಗಲಮೇಲೆ ಕೈಯನ್ನಿರಿಸಿ ನಗುತ್ತಾ ಹೇಳಿದಳು. "ಅಂದು ಮಲ್ಲ ಯುದ್ಧದಲ್ಲಿ ಚೆಲುವಯ್ಯನ ಗರ್ವಭಂಗ ಮಾಡಿದ ಅಪ್ಪಾಜಿ; ನೀನು ಪಾರಿ ತೋಷಕವೆಂದು ಒಲಿದಿತ್ತ ರತ್ನಹಾರವನ್ನು ಕಂಠದಲ್ಲಿ ಧರಿಸಿದ ಅಪ್ಪಾಜಿ!"

"ತಂಗಿ, ನಿನ್ನ ಚೇಷ್ಟೆ ಸಾಕು. ನಾನು ಅಪ್ಪಾಜಿಯನ್ನು ಪ್ರೀತಿಸುತ್ತಿರುವೆನೆಂದು ನೀನು ನನ್ನನ್ನು ಈ ರೀತಿ ಅಣಕಿಸಬಾರದು." ಎಂದು ಹೇಳಿ ಹೂವಯ್ಯ ಹಸಿಮುನಿಸನ್ನು ತಾಳಿದ.

"ನಾನೇಕೆ ಸುಳ್ಳು ಹೇಳಲಿ? ನಿನ್ನ ಕೊರಳಾಣೆಯಾಗಿಯೂ ನನ್ನ ನುಡಿ ನಿಜ."

"ಅಪ್ಪಾಜಿಯೇ?"

"ಹೌದು. ನೀನು ಹಗಲಿರುಳು ಧ್ಯಾನಮಾಡುತ್ತಿರುವ ಅಪ್ಪಾಜಿ!"

"ನೀನು ಅವನನ್ನು ಎಲ್ಲಿ ನೋಡಿದೆ? ಯಾವಾಗ ನೋಡಿದೆ? ಅವನೇನು ಹೇಳಿದ? ಏನುಮಾಡುತ್ತಿದ್ದ? ನನ್ನನ್ನು ಕೇಳಿದನೇ? ಎಲ್ಲಿ ವಾಸಿಸುತ್ತಿದ್ದಾನೆ? ಅವನು ನಿನ್ನ ಸಂಗಡ ಏನು ಹೇಳಿ ಕಳುಹಿದ? ಒಂದೇ ಮಾತಿನಲ್ಲಿ ಎಲ್ಲವನ್ನೂ ಹೇಳು."

"ಅಣ್ಣಾ, ನೀನು ಏಕಕಾಲದಲ್ಲಿ ಹತ್ತಾರು, ಅಲ್ಲ ನೂರಾರು ಪ್ರಶ್ನೆಗಳ ಬಾಣಗಳನ್ನು ನನ್ನ ಮೇಲೆ ಎಸೆಯುತ್ತಿರುವೆ. ಆದಿಶೇಷನಂತೆ ಹಲವು ನಾಲಗೆಗಳುಳ್ಳವಳು ನಾನಾಗಿದ್ದರೆ ನಿನ್ನ ಪ್ರಶ್ನೆಗಳಿಗೆಲ್ಲ ನಾನು ಏಕಕಾಲದಲ್ಲಿ ಉತ್ತರ ಕೊಡುತ್ತಿದ್ದೆ." ಮಲ್ಲಿಗೆ ನಗುತ್ತಾ ನುಡಿದಳು. "ನಿನಗೆ ಅಪ್ಪಾಜಿಯಲ್ಲಿ ಇಷ್ಟೊಂದು ಆಸಕ್ತಿಯಿದೆಯೆಂದು ನಾನು ಅರಿತಿರಲಿಲ್ಲ. ನನ್ನ ಈ ಒಂದು ನಾಲಗೆ ಒಂದು ನುಡಿಯಲ್ಲಿ ಹೇಗೆತಾನೇ ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರಿಸ ಬಲ್ಲುದು?"

"ಅದಿರಲಿ! ನಾನು ಕಾಡಿನಲ್ಲಿ ಪುರುಷವೇಷ ತೊಟ್ಟು ವಾಸಿಸುತ್ತಿರುವೆನೆಂಬುದನ್ನು ಬಲ್ಲನೇ? ಅಂದು ಮಲ್ಲಯುದ್ಧದ ದಿನವಿದ್ದಂತೆ ಈಗಲೂ ತಿಳಿಮೊಗನಾಗಿ, ಮ್ಲಾನತೆಯಿಲ್ಲದೆ ಕಂಗೊಳಿಸುತ್ತಿದ್ದನೇ?

"ಪ್ರೇಮದಗ್ಧ ಹೃದಯದ ತಾಪವೇನೆಂಬುದನ್ನು ಅರಿಯುವುದು ಸುಲಭ" ಮಲ್ಲಿಗೆ ಮಾರ್ನುಡಿದಳು. "ಆತ ಒಂದು ಮರದ ಅಡಿಯಲ್ಲಿ ಉದುರಿದ ಹಣ್ಣಿನಂತೆ ಹೊರಳಾಡುತ್ತಿದ್ದ."

"ಈ ಬಗೆಯ ಹಣ್ಣುದುರಬೇಕಾದರೆ, —ಆ ಮರ ಕಾರಣಿಕ ಶಕ್ತಿಯುಳ್ಳದ್ದಾಗಿರಬೇಕು !"

"ಅಣ್ಣಾ,—ನೀನು ಹೀಗೆ ನಡುವೆ ಬಾಯಿಹಾಕಿ, ನನ್ನ ಮಾತುಗಳಿಗೆ ಬಿರಿಹಾಕಬೇಡ."

"ಇಲ್ಲ — ನಿನ್ನ ನುಡಿಯನ್ನು ಮುಂದುವರಿಸು."

"ಅವನು ಗಾಯಗೊಂಡ ವೀರನಂತೆ ನೆಲದಮೇಲೆ ಬಿದ್ದು ಹೊರಳುತ್ತಿದ್ದ."

"ಅಂತಹ ದೃಶ್ಯ ಕರುಣಾಜನಕವೇ ಸರಿ."

"ತಡೆ! ಅವನು ಬೇಟೆಗಾರನಂತೆ,— ಬಿಲ್ಲಂಬುಗಳನ್ನು ತೊಟ್ಟಿದ್ದ."

"ನನ್ನ ಎದೆಯನ್ನು ಸೀಳಲೆಂದೇ ಬಿಲ್ಲಂಬುಗಳನ್ನು ಕೈಯಲ್ಲಿ ಹಿಡಿದಿರುವನು."

"ನಿನ್ನ ಉಡಿಗೆತೊಡಿಗೆಗಳಿಗೆ ಒಪ್ಪುವ ಮಾತಲ್ಲ ಇದು."

"ಮಲ್ಲಿಗೆ, ವೇಷವನ್ನು ಪ್ರಚ್ಛನ್ನಗೊಳಿಸಿದರೂ ಎದೆ ಬದಲಾಗದು." ಎಂದು ಹೇಳಿ ಹೂವಯ್ಯ ನಿಟ್ಟುಸಿರನ್ನು ಬಿಟ್ಟ.

---

## ಹನ್ನೆರಡು

ಅನಿತರಲ್ಲಿ ಹೆಗಲಿಗೆ ಬಿಲ್ಲು ಸಿಕ್ಕಿಸಿಕೊಂಡು, ಕರದಲ್ಲಿ ಸರಳುಗಳನ್ನು ಹಿಡಿದುಕೊಂಡು ಅಪ್ಪಾಜಿ ಅಲ್ಲಿಗೆ ಆಗಮಿಸಿದ. ಅವನು ಹೂವಯ್ಯನ ದೃಷ್ಟಿಗೆ ಬಿದ್ದ. ಆಗ ಹೂವಯ್ಯ "ನೋಡು ಮಲ್ಲಿಗೆ ನಾನು ಅಮ್ರುಸ್ವಭಾವದ ಒರಟನಂತೆ ಅವನ ಸಂಗಡ ಮಾತಾಡುವೆನು. ಅವನು ಏನು ಮಾಡುವನೆಂದು ನೋಡೋಣ. ಅವನ ಪರಿಚಯವಿಲ್ಲದವನಂತೆ ನಾನು ನಟಿಸುವೆನು" ಎಂದು ಮಲ್ಲಿಗೆಗೆ ಹೇಳಿದ.

"ಲೋ ಬೇಟೆಗಾರ, ಈ ಕಡೆ ಬಾ." ಎಂದು ಹೂವಯ್ಯ ಅಪ್ಪಾಜಿಯನ್ನು ಕರೆದ.

"ನನ್ನನ್ನೇಕೆ ಕೂಗಿದಿರಿ? ನನ್ನಿಂದೇನಾಗಬೇಕು?" ಎಂದು ವಿಸ್ಮಯ ದೃಷ್ಟಿಯನ್ನು ಬೀರುತ್ತಾ ಅಪ್ಪಾಜಿ ಹೂವಯ್ಯ ಮಲ್ಲಿಗೆಯರಿದ್ದೆಡೆಗೆ ಬಂದ.

"ಈಗ ತಾಸೆಷ್ಟು."

"ನೀನು ಹೊತ್ತೆಷ್ಟೆಂದು ಕೇಳಬೇಕಾಗಿತ್ತು — ತಾಸನ್ನು ಕೇಳಲು ಈ ಕಾಡಿನಲ್ಲಿ ಗಡಿಯಾರವಿಲ್ಲ."

"ಹಾಗಾದರೆ ಈ ಕಾಡಿನಲ್ಲಿ ಪ್ರಾಮಾಣಿಕನಾದ ಪ್ರಣಯಿಯಿಲ್ಲವೆಂದೇ ಹೇಳಬೇಕಾಗುವುದು. ಪ್ರತಿ ನಿಮಿಷದಲ್ಲಿ ಬಿಡುವ ಪೇರುಸಿರು, ಪ್ರತಿ ತಾಸಿನಲ್ಲಿ ಉದ್ಗಾರವೆತ್ತಿದ ವಿರಹೋಕ್ತಿ—ಇವು ಗಡಿಯಾರದ ಮುಳ್ಳುಗಳಂತೆ ನಿಧಾನ ವಾಗಿ ಸಮಯವನ್ನು ಅಳೆಯಬಲ್ಲವು."

"ಎಲೋ ಕುರುಬರ ಹುಡುಗ,—ನಿನ್ನ ವಸತಿಯೆಲ್ಲಿ?" ಎಂದು ಅಪ್ಪಾಜಿ ಪ್ರಶ್ನಿಸಿದ.

"ಎಲೋ ಬೇಡ, ಪಂಚೆಗೊಂದು ಅಂಚಿರುವಂತೆ,—ಈ ಕಾಡಿಗೊಂದು ಸರಹದ್ದಿದೆ. ಅಲ್ಲಿ ನಾವು ವಾಸಿಸುತ್ತಿದ್ದೇವೆ. ಈಕೆ ನನ್ನ ತಂಗಿ ಮಲ್ಲಿಗೆ. ನನ್ನ ಹೆಸರು ಹೂವಯ್ಯನೆಂದು."

"ನೀವು ಈ ಕಾಡುಕೊಂಪೆಯಲ್ಲಿ ಹುಟ್ಟಿಬಳೆದವರೇ?"

"ನಾವು ಹುಟ್ಟಿದೆಡೆಯಲ್ಲಿ ಈ ತನಕ ಬಳೆದಿದ್ದೇವೆ."

"ಆದರೆ ನಿನ್ನ ಮಾತಿನ ಮೋಡಿ ಕಾಡುಮೇಡುಗಳಲ್ಲಿ ವಾಸಿಸುವ ಕುರುಬರ ಶೈಲಿಗಿಂತ ಬೇರೆಯಾಗಿದೆ." ಹೂವಯ್ಯನ ಮಾತುಗಳನ್ನು ನಂಬದೆ ಅಪ್ಪಾಜಿ ನುಡಿದ. "ಈ ಬಗೆಯ ನಾಜೂಕಿನ ಮಾತುಗಾರಿಕೆ ಕುರುಬರ ಹಾಡಿಯಲ್ಲಿ ದೊರೆಯುವುದು ಅಶಕ್ಯ."

"ನಿನ್ನ ಹಾಗೆಯೇ ಅನೇಕರು ನನ್ನ ಮಾತುಗಾರಿಕೆಯನ್ನು ಕೇಳಿ ವಿಸ್ಮಯ ತಾಳಿದ್ದಾರೆ." ಎಂದು ಹೂವಯ್ಯ ನಗುತ್ತಾ ಮಾರ್ನುಡಿದ. "ನನಗೊಬ್ಬ ಮಾವ ಇದ್ದ. ಅವನು ನಗರಕ್ಕೆ ತೆರಳಿ ಓದುಕಲಿತು ಸಾಹಿತ್ಯ ನಾಟಕಗಳನ್ನೆಲ್ಲಾ ಅಭ್ಯಾಸಮಾಡಿದ್ದ. ಅವನಿಂದ ನಾನು ನಯವಾದ ಮಾತು ಗಾರಿಕೆ ಓದುಬರಹಗಳನ್ನು ಕಲಿತೆ. ಆ ಮಾವ ಒಮ್ಮೆ ಪ್ರೇಮಜ್ವರಕ್ಕೆ ತುತ್ತಾದ. ಕೆಲ ತಿಂಗಳು ಕಳೆದ ಮೇಲೆ ಆ ರೋಗ ವಾಸಿಯಾಯಿತಂತೆ. ಆ ಮೇಲೆ ಅವನು ಪ್ರೇಮವೆಂಬುದು 'ಹುಚ್ಚು' ಎಂಬುದರ ಪರ್ಯಾಯ ಪದವೆಂದು ಅವನು ಅನೇಕಸಲ ಹೇಳುವುದನ್ನು ನಾನು ಕೇಳಿದ್ದೇನೆ. ಅನು ಭವದ ಆಧಾರದಿಂದ ಅವನ ಮಾತು ನಿಜವೆಂದು ನನಗನಿಸುತ್ತದೆ.

"ಅದೇಕೆ ಪ್ರೇಮವನ್ನು ಹುಚ್ಚೆಂದು ತಿಳಿಯಬೇಕು?"

"ಅದು ಹುಚ್ಚೇ ಸರಿ. ಸದ್ಯ ನಾನಾದರೂ ಆ ಹುಚ್ಚಿನಿಂದ ದೂರವಿರು ವೆನಲ್ಲ ಎಂಬುದೇ ನನಗಿರುವ ತೃಪ್ತಿ." ಹೂವಯ್ಯನ ಕೊರಳಿಂದ ನಗೆ ಬೆರೆತ ಮಾತುಗಳು ಹೊರಟವು. "ಇಲ್ಲೇ ನಾನು ನಿನಗೊಂದು ದೃಷ್ಟಾಂತವನ್ನು

ಕೊಡಬಲ್ಲೆ. ಯಾವನೋ ಒಬ್ಬ ಹುಚ್ಚ ಪ್ರಣಯ ದೆವ್ವದಂತೆ ಈ ಕಾಡಿನಲ್ಲೆಲ್ಲಾ ಅಲೆದಾಡುತಿದ್ದಾನೆ. ಅವನು ಕಾಡಿನ ಒಂದೇ ಒಂದು ಮರವನ್ನು ಅಂದವಾಗಿ ಇರಗೊಡುವಂತಿಲ್ಲ. ಪ್ರತಿಯೊಂದು ಮರದ ಮೇಲೆಯೂ ತನ್ನ ನಲ್ಲೆಯ ಹೆಸರನ್ನು ಕೆತ್ತಿರುತ್ತಾನೆ. ಮಾವಿನ ಗಿಡಗಳ ಮೇಲೆ ನೀಲಾಂಬಿಕೆಯ ಸೌಂದರ್ಯವನ್ನು ಬಣ್ಣಿಸುವ ಗೀತೆಗಳನ್ನು ಬರೆದು ತೂಗುಹಾಕುತ್ತಾನೆ. ಬಿದಿರು ಮೆಳೆಗಳಿಗೆ ವಿರಹಗೀತೆಗಳನ್ನು ಸಿಕ್ಕಿಸುತ್ತಾನೆ. ಆ ತಲೆತಿರುಕ ಪ್ರಣಯಿಯೇನಾದರೂ ನನಗೆ ದೊರೆತಿದ್ದರೆ ಈ ರೋಗದ ಬಿಡುಗಡೆಗೆ ಒಂದು ನಿವಾರಣೋಪಾಯವನ್ನು ಸೂಚಿಸುತ್ತಿದ್ದೆ".

"ನೀನು ಬಣ್ಣಿಸುವ ಪ್ರೇಮರೋಗಿ ನಾನೇ ಆಗಿರುವೆನು." ಪ್ರಣಯ ಗೀತೆಗಳನ್ನು ಬರೆದು ಮರಗಿಡಗಳ ಮೇಲೆ ತೂಗುಹಾಕಿದ ವ್ಯಕ್ತಿ ತಾನಾಗಿರುವೆನೆಂಬುದನ್ನು ಅಪ್ಪಾಜಿ ಹೂವಯ್ಯನಿಗೆ ಅರುಹಿದ.

"ಸುಳ್ಳು! ನಾನು ನಿನ್ನ ಮಾತುಗಳನ್ನು ನಂಬೆ." ಎಂದು ಹೂವಯ್ಯ ಅಪ್ಪಾಜಿಯನ್ನು ದಿಟ್ಟಿಸಿನೋಡುತ್ತಾ ಉಸುರಿದ.

"ಏಕೆ ನನ್ನ ಮಾತುಗಳನ್ನು ನೀನು ನಂಬುವುದಿಲ್ಲ?

"ನಿನ್ನ ಚಿಕಿತ್ಸಾವಿಧಾನವಾದರೂ ಏನು?"

"ನನ್ನ ಮಾವ ಬರೆದ ಪ್ರಣಯಶಾಸ್ತ್ರದಲ್ಲಿ ಹೇಳಿದ ಒಂದೇ ಒಂದು ಲಕ್ಷಣ ಸಹ ನಿನ್ನಲ್ಲಿ ಗೋಚರಿಸುವುದಿಲ್ಲ. ನಿನ್ನ ಮಾತನ್ನು ನಾನು ಹೇಗೆ ನಂಬಲಿ?"

"ಆ ಪ್ರಣಯಶಾಸ್ತ್ರದಲ್ಲಿ ಹೇಳಲ್ಪಟ್ಟ ಲಕ್ಷಣಗಳು ಯಾವುವು?"

"ಹೂಂ, ಕಿವಿಗೊಟ್ಟು ಕೇಳು. ಒಂದು—ಸೊರಗಿ ಗುಳಿಬಿದ್ದ ಕೆನ್ನೆಗಳು. ಅವು ನಿನಗಿಲ್ಲ." ಹೂವಯ್ಯ ಪ್ರೇಮರೋಗದ ಲಕ್ಷಣಗಳನ್ನು ವಿವರಿಸ ತೊಡಗಿದ. ಎರಡು—ರಾತ್ರಿ ನಿದ್ರೆಯಿಲ್ಲದುದರಿಂದ ಕೆಂಪಡರಿ ಗುಳಿಬಿದ್ದ ಕಣ್ಣುಗಳು. ನಿನ್ನ ಕಣ್ಣುಗಳು ಆ ರೀತಿಯಲ್ಲಿಲ್ಲ. ಮೂರು—ಎಣ್ಣೆ ನೀರು ಕಾಣದೆ ಜಡೆಗಟ್ಟಿದ ಕೆಂಪಗಿನ ಕೇಶರಾಜಿ. ನಿನ್ನ ಕುರುಳುಗಳು ಜಡೆಗಟ್ಟದೆ ಚೆಲುವಾಗಿವೆ. ನಾಲ್ಕು—ನಿರಂತರ ಹೃದಯೇಶ್ವರಿಯ ಪುಣ್ಯನಾಮವನ್ನು ಧ್ಯಾನಮಾಡುವ ಸ್ಥಿರೋತ್ಸಾಹ, ಆ ಹುರುಪು ನಿನ್ನಲ್ಲಿ ಗೋಚರಿಸುವುದಿಲ್ಲ. ಐದು—ನೀರುಗಾಣದೆ ಹೊಲಸಾಗಿರುವ ಉಡಿಗೆತೊಡಿಗೆಗಳು. ಆದರೆ ನಿನ್ನ ಅರಿವೆಗಳು ಶುಭ್ರವಾಗಿವೆ. ಈ ಚಿಹ್ನೆಗಳ ಪೈಕಿ ಒಂದೇ ಒಂದಾದರೂ

ನಿನ್ನಲ್ಲಿ ತೋರಿಬರುತ್ತಲಿಲ್ಲ. ನೀನು ನೀಲಾಂಬಿಕೆಯನ್ನು ಪ್ರೀತಿಸುವಿಯೆಂಬುದನ್ನು ನಾನು ಹೇಗೆ ನಂಬಲಿ? ನೀನು ಪ್ರಣಯಿಯ ವೇಷ ತಳೆದ ನಾಟಕಗಾರನಲ್ಲದೆ ಪ್ರಣಯಿಯಲ್ಲ!"

"ಇಲ್ಲ. ನೀಲಾಂಬಿಕೆಯ ಕೊರಳಾಣೆಯಾಗಿಯೂ ನನ್ನ ಮಾತು ಸತ್ಯ. ಆ ಪ್ರಣಯ ಗೀತೆಗಳನ್ನು ಬರೆದ ಕೈ ನನ್ನದು."

"ನಿನ್ನ ಗೀತೆಯ ಸಾಲುಗಳು ಸಾರಿಹೇಳುವಂತೆ,—ನೀನು ಆಕೆಯನ್ನು ಪ್ರೀತಿಸುವಿಯಾ?"

"ಗೀತೆಯ ಸಾಲುಗಳಾಗಲೀ,—ಮಾತುಗಳಾಗಲೀ, ನನ್ನ ಹೃದಯದಂತರಾಳದಲ್ಲಿ ಹುದುಗಿರುವ ಉದಾತ್ತ ಪ್ರೇಮದ ಪ್ರಖರತೆಯನ್ನು ತಿಳಿಸಲು ಶಕ್ತಿಯುಳ್ಳವುಗಳಾಗಲಾರವು."

"ಒಲವೆಂದರೆ ಮರುಳೇ ಸರಿ. ಮರುಳರಂತೆ ನೀನೂ ಕತ್ತಲೆ ಕೋಣೆಯ ವಾಸಕ್ಕೂ ಚಾಟಿ ಏಟುಗಳಿಗೂ ಯೋಗ್ಯನೇ ಸರಿ!" ಹೂವಯ್ಯನ ಕೊರಳಿಂದ ನಗುಮಾತು ಹೊರಟಿತು. "ಆದರೆ ಇದು ಬಹು ಸರ್ವಸಾಮಾನ್ಯವಾದ ಬೇನೆ. ಅಲ್ಲದೆ ಶಿಕ್ಷೆ ಕೊಡುವವರು ಸಹ ಈ ರೋಗಕ್ಕೆ ಬಲಿಬೀಳುವುದೂ ಅಪೂರ್ವವಲ್ಲ. ಆದುದರಿಂದ ಹುಚ್ಚರಿಗೆ ನೀಡುವ ದಂಡನೆಯನ್ನು ಪ್ರೇಮರೋಗಿಗಳಿಗೆ ಕೊಡುತ್ತಲಿಲ್ಲವೆಂದು ತೋರುವುದು. ಆದರೂ ನಾನು ಈ ರೋಗಕ್ಕೆ ಒಂದು ಚಿಕಿತ್ಸಾ ವಿಧಾನವನ್ನು ತಿಳಿಸಬಲ್ಲೆ."

"ನೀನು ಯಾರಿಗಾದರೂ ಈ ರೋಗಕ್ಕೆ ಚಿಕಿತ್ಸೆಯನ್ನು ಕೈಗೊಂಡಿದ್ದೀಯಾ?"

"ಒಬ್ಬನ ರೋಗವನ್ನು ವಾಸಿಮಾಡಿದ್ದೇನೆ. ಈ ಚಿಕಿತ್ಸಾ ಕ್ರಮವನ್ನು ಸಹ ನನ್ನ ಮಾವನಿಂದಲೇ ನಾನು ಕಲಿತುದು. ನಾನು ಹೇಗೆ ರೋಗವನ್ನು ಗುಣಪಡಿಸಿದೆ ಎಂಬುದನ್ನು ಕೇಳು." ಹೂವಯ್ಯ ಪ್ರೇಮರೋಗದ ಚಿಕಿತ್ಸಾ ವಿಧಾನವನ್ನು ವಿವರಿಸತೊಡಗಿದ. "ಪ್ರೇಮವ್ಯಾಧಿಗೆ ಈಡಾದ ಆ ರೋಗಿ ನನ್ನನ್ನು ತನ್ನ ಹೃದಯೇಶ್ವರಿಯೆಂದು ಕಲ್ಪನೆಮಾಡಿ ನನ್ನನ್ನು ಪ್ರೀತಿಸುವ ಅಭಿನಯವನ್ನು ಕೈಗೊಂಡ. ಅವನು ನನ್ನ ಗುಣಗಾನ ಮಾಡುತ್ತಿದ್ದ; ರೂಪರಾಶಿಯನ್ನು ವರ್ಣಿಸುತ್ತಿದ್ದ; ತನ್ನನ್ನು ಅನುಗ್ರಹಿಸಿ ಪುನೀತಗೊಳಿಸಬೇಕೆಂದು ಪ್ರಾರ್ಥಿಸುತ್ತಿದ್ದ; ಮೊರೆಯಿಡುತ್ತಿದ್ದ! ಕಂಬನಿಯ ಹೊನಲನ್ನು ಹರಿಸುತ್ತಿದ್ದ; ಅವನ ವರ್ತನೆಗಳಿಗೆ ಪ್ರತಿಯಾಗಿ ನಾನು ಮೋರೆಯ ಬಣ್ಣವನ್ನು ಬದಲಿಸು

ತ್ತಿದ್ದೆ; ಅವನ ಕೋರಿಕೆಗಳನ್ನು ತಿರಸ್ಕರಿಸುತ್ತಿದೆ; ನಿಂದಿಸುತ್ತಿದ್ದೆ; ಅವನಿಗೋಸ್ಕರ ಕಣ್ಣೀರು ಹಾಕುತ್ತಿದ್ದೆ; ಇನ್ನೊಂದು ಕ್ಷಣದಲ್ಲಿ ಕೋಪ ತಾಳುತ್ತಿದ್ದೆ; ಕೊನೆಗೆ ಅನುಗ್ರಹಿಸುತ್ತಿದ್ದೆ. ಹೀಗೆ ಮೂರು ತಿಂಗಳ ಕಾಲ ಪ್ರಣಯಾಭಿನಯ ಜರಗಿತು. ಈ ಚಿಕಿತ್ಸಾಕ್ರಮದಿಂದ ಅವನನ್ನು ಮರುಳು ಬಿಟ್ಟು ತೊಲಗಿತು. ನನ್ನ ಮಾವನಿಗೆ ಹಿಡಿದ ಒಲವಿನ ಹುಚ್ಚೂ ಈ ಚಿಕಿತ್ಸಾಕ್ರಮದಿಂದ ಪರಿಹಾರವಾಯಿತಂತೆ. ಅವನು ಇದನ್ನು ತನ್ನ ಪ್ರಣಯಶಾಸ್ತ್ರದಲ್ಲಿ ಉಲ್ಲೇಖಿಸಿದ್ದಾನೆ. ಬೇಕಾದರೆ ನೀನೂ ಈ ಚಿಕಿತ್ಸೆಯನ್ನು ಹೊಂದುವಿಯಂತೆ. ಮೂರುತಿಂಗಳ ಕಾಲಾವಧಿಯಲ್ಲಿ ಒಲವಿನ ಕಿಲುಬು ಹಿಡಿದ ನಿನ್ನ ಎದೆಯನ್ನು ತೊಳೆದು ಸ್ಫಟಿಕದಂತೆ ಸ್ವಚ್ಛಗೊಳಿಸಬಲ್ಲೆನು."

"ನಿನ್ನ ಚಿಕಿತ್ಸಾ ಕ್ರಮದಲ್ಲಿ ನನಗೇನೂ ನಂಬಿಗೆಯಿಲ್ಲ. ಈ ಚಿಕಿತ್ಸೆ ನನಗೆ ಬಾಧಿಸಿದ ರೋಗವನ್ನು ಪರಿಹರಿಸದು."

"ನನ್ನ ಆ ಮಾವನ ಆಣೆಯಾಗಿಯೂ ಹೇಳುವೆನು." ಹೂವಯ್ಯ ಗಂಭೀರಸ್ವರದಲ್ಲಿ ಹೇಳಿದ. "ನೀನು ಪ್ರತಿನಿತ್ಯ ನನ್ನ ಗುಡಿಸಲಿಗೆಬಂದು ನನ್ನನ್ನು ನೀಲಾಂಬಿಕೆಯೆಂದು ಕರೆದು ಪ್ರಣಯಾಭಿನಯವನ್ನು ಕೈಗೊಂಡರೆ ಮೂರೇ ಮೂರುತಿಂಗಳುಗಳಲ್ಲಿ ನಿನ್ನ ರೋಗ ವಾಸಿಯಾಗುವುದು."

"ಆಗಲಿ ಕಾಸು ಖರ್ಚಿಲ್ಲದ ವೈದ್ಯ. ಬೇರೇನಿಲ್ಲದಿದ್ದರೂ ಬೇಸರ ಪರಿಹಾರಕ್ಕೊಂದು ದಾರಿಯಾಗುವುದು." ಅಪ್ಪಾಜಿ ಹೂವಯ್ಯನ ಚಿಕಿತ್ಸೆಯನ್ನು ಕೈಗೊಳ್ಳಲು ಒಪ್ಪಿದ. "ಪ್ರತಿನಿತ್ಯ ಮುಂಜಾನೆ ನಿನ್ನ ಗುಡಿಸಲಿಗೆ ಬರುವೆನು."

"ಬಾ, ಈಗಲೇ ನನ್ನ ಚಿಕಿತ್ಸೆ ಪ್ರಾರಂಭವಾಯಿತು."

"ಆಗಲಿ— ಹೂವಯ್ಯ."

"ಅಲ್ಲ—ಹಾಗೆ ನನ್ನ ಕರೆಯಕೂಡದು. ನನ್ನನ್ನು ನೀನು ಚಿಕಿತ್ಸೆ ಮುಗಿಯುವನಕ ನೀಲಾಂಬಿಕೆಯೆಂದೇ ಕರೆಯಬೇಕು."

ಹೂವಯ್ಯ ಅಪ್ಪಾಜಿಯನ್ನು ತನ್ನ ಕುಟೀರಕ್ಕೆ ಕರೆದೊಯ್ದು; ತನ್ನ ವಸತಿಯ ಪರಿಚಯವನ್ನು ಅವನಿಗೆ ಮಾಡಿಕೊಟ್ಟ. ಅಂದಿನಿಂದ ಪ್ರತಿನಿತ್ಯ ಹೂವಯ್ಯನ ಕುಟೀರದಲ್ಲಿ ಕೃತಕ ಪ್ರೇಮಾಭಿನಯದ ನಾಟಕ ಜರಗತೊಡಗಿತು. ಅಪ್ಪಾಜಿ ಕುರಿಗಾಹಿ ಹೂವಯ್ಯನನ್ನು ನೀಲಾಂಬಿಕೆಯೆಂದು ಸಂಬೋಧಿಸುತ್ತಿದ್ದ; ಅವಳ ರೂಪ ಗುಣಶೀಲಗಳನ್ನು ಬಣ್ಣಿಸುತಿದ್ದ; ತನ್ನ ಹೃದಯೇಶ್ವರಿಯೆಂದು ಕರೆಯುತ್ತಿದ್ದ; ತನಗೆ ಒಲಿಯಬೇಕೆಂದು ಬೇಡಿಕೊಳ್ಳುತ್ತಿದ್ದ;

ಕಡೆಗಣ್ಣಿನ ಕುಡಿಮಿಂಚನ್ನು ತನ್ನ ಮೇಲೆ ಹರಹಿ ತನ್ನ ಬಾಳುವೆಯನ್ನು ಸಾರ್ಥಕಗೊಳಿಸಬೇಕೆಂದು ಅಂಗಲಾಚುತಿದ್ದ; ತನ್ನ ಒಲವು ನಿಜವಾದುದು, ನಿತ್ಯವಾದುದು ಎಂದು ಆಣೆಯಿಟ್ಟು ಪ್ರತಿಜ್ಞೆಮಾಡುತ್ತಿದ್ದ.

ಹೂವಯ್ಯ ನೀಲಾಂಬಿಕೆಯ ಭೂಮಿಕೆಯನ್ನು ವಹಿಸಿ, ಅಪ್ಪಾಜಿಯ ಸ್ತುತಿಯೆಲ್ಲ ಬರೇ ಬಣ್ಣನೆಯಲ್ಲದೆ ಹೃದಯದಿಂದ ಬಂದುದಲ್ಲವೆಂದು ಅಲ್ಲಗಳೆಯುತ್ತಿದ್ದ; ಕೃತಕ ಕೋಪವನ್ನು ಅಭಿನಯಿಸುತ್ತಿದ್ದ; ನೀಲಾಂಬಿಕೆಗಿಂತ ಮಿಗಿಲಾದ ಸುಂದರಿಯೊಬ್ಬಳು ಅವನ ಕಣ್ಣುಗಳಿಗೆ ಬಿದ್ದರೆ ಅಪ್ಪಾಜಿಯ ಪ್ರೇಮವಚನಗಳೆಲ್ಲ ಬಂಗಾರದ ಬಣ್ಣ ತಳೆದ ಹಿತ್ತಾಳೆಯಂತಾಗುವುವು ಎಂದು ಜರೆಯುತ್ತಿದ್ದ; ಕೊನೆಗೊಮ್ಮೆ ಅಪ್ಪಾಜಿಯ ಪ್ರೇಮಭಿಕ್ಷಾಯಾಚನೆಯನ್ನು ಅನುಗ್ರಹಿಸುತ್ತಿದ್ದ.

ಹೀಗೆ ಅನುದಿನ ಸಾಗತೊಡಗಿತು ನೂತನವಾದ ಈ ಪ್ರೇಮಾಭಿನಯದ ನಾಟಕ. ಹೂವಯ್ಯನ ಚಿಕಿತ್ಸೆ ಅಪ್ಪಾಜಿಯ ಹೃದಯತಾಪವನ್ನು ಸಾಂತ್ವನಗೊಳಿಸುವುದರ ಬದಲು ಉಲ್ಬಣಗೊಳಿಸುತ್ತಿದ್ದಿತು. ಆದರೆ ತನ್ನೊಡನೆ ಪ್ರೇಮಾಭಿನಯವನ್ನು ನಟಿಸುತ್ತಿರುವ ತರುಣವ್ಯಕ್ತಿಯೇ, ತನ್ನ ಹೃದಯೇಶ್ವರಿಯಾದ ನೀಲಾಂಬಿಕೆಯೆಂಬುದು ತಿಳಿಯದು. ಆಕೆ ಧರಿಸಿದ ಪುರುಷವೇಷ ಅವನನ್ನು ಮೋಸಗೊಳಿಸಿದ್ದಿತು. ಆದರೂ ಹೂವಯ್ಯನು ನುಡಿದ ಪ್ರೇಮಪೂರ್ಣ ವಚನಗಳು ಚಂದ್ರನು ಮೇಘಾಚ್ಛಾದಿತನಾದರೂ, ಅವನ ತಂಪು ಇಳೆಯ ಸಸ್ಯಾವಳಿಗೆ ದೊರಕುವಂತೆ,—ಅಪ್ಪಾಜಿಯ ಹೃದಯಕ್ಕೆ ಸಂತಸವನ್ನು ನೀಡುತ್ತಿದ್ದುವು.

ಹೂವಯ್ಯ ಅಪ್ಪಾಜಿಯ ಕೊರಳಿಂದ ಹರಿದುಬರುವ ಒಲವಿನ ನುಡಿಗಳು ನೈಜವಾದವುಗಳು ಮತ್ತು ಹೃದಯದೊಳಗಿಂದ ಹರಿದುಬಂದವುಗಳು ಎಂಬುದನ್ನು ಬಲ್ಲನು. ನೀಲಾಂಬಿಕೆಯ ರೂಪು ಆತನ ಹೃದಯದಲ್ಲಿ ಎಷ್ಟು ಆಳವಾಗಿ ಕೆತ್ತಲ್ಪಟ್ಟಿದೆಯೆಂಬುದನ್ನು ಗುರುತಿಸಿದ. ಅಪ್ಪಾಜಿಯ ಹೃದಯದಲ್ಲಿ ಬೆಳಗುತ್ತಿರುವ ಪ್ರೇಮಜ್ಯೋತಿ ಎಷ್ಟು ಉಜ್ವಲವಾದುದು ಮತ್ತು ಉದಾತ್ತವಾದುದು ಎಂಬುದರ ಅರಿವು ಅವನಿಗಾಯಿತು. ಅಪ್ಪಾಜಿಯಂತಹ ನಿಷ್ಕಲಂಕ ಧೀರ ಹೃದಯದ ತರುಣನ ಆರಾಧ್ಯಮೂರ್ತಿಯಾದ ನೀಲಾಂಬಿಕೆಯ ಭಾಗ್ಯವನ್ನು ಕಂಡು ಹಿರಿಹಿಗ್ಗಿದ.

ಕೆಲವು ಸಲ ಹೂವಯ್ಯನಿಗೆ ತಾನು ಪುರುಷ ವೇಷವನ್ನು ತಾಳಿ,—

ಅಪ್ಪಾಜಿಯನ್ನು ವಂಚಿಸಿ,—ಅವನ ಹೃದಯದ ಉಜ್ವಲಭಾವಗಳನ್ನು ನಿಕಷಕ್ಕೆ ಹಚ್ಚುವುದು ಹೊಲ್ಲದ ಗೈಮೆಯೆಂದೆನಿಸುತ್ತಿದ್ದಿತು. ಆದರೆ ಅಪ್ಪಾಜಿಯ ಒಲವಿನ ದೋರೆಗಾಯಿ, ವಿರಹವ್ಯಥೆಯ ಗಾಳಿಬಿಸಿಲುಗಳನ್ನುಂಡು ಮಾಗುವ ತನಕ,—ಈ ನಾಟಕವನ್ನು ಮುಂದುವರಿಸುವುದು ಅಗತ್ಯವೆಂದು ಅವನು ಮನಗಂಡ.

ಸೌಜನ್ಯಶೀಲೆಯಾದ ಮಲ್ಲಿಗೆ ಈ ಪ್ರೇಮಾಭಿನಯದ ಅಣಕ ಅಣ್ಣ ಹೂವಯ್ಯನಿಗೆ ಅಪಾರ ಸಂತೋಷ ನೀಡುವುದೆಂದು ಅರಿತುದರಿಂದ,—ಅವಳು ಅಡಚಣೆಯನ್ನು ತಂದೊಡ್ಡಲಿಲ್ಲ. ಹೂವಯ್ಯ ಅಪ್ಪಾಜಿಯ ಒಡ ನಾಟದಲ್ಲಿ ಸಂತಸವನ್ನು ಪಡೆಯುತ್ತಿದ್ದುದನ್ನು ಕಂಡು ತಾನೂ ತೃಪ್ತಿ ತಾಳು ತ್ತಿದ್ದಳು. ಅರಮನೆಯ ರಾಜವೈಭವದ ನೆರಳಲ್ಲಿ ಗೋಚರಿಸದ ಸೊಗ,—ಕಾಡಿನ ಮರಗಳ ನೆರಳಿನಲ್ಲಿ, ಬಳ್ಳಿಗಳ ಎಡೆಯಲ್ಲಿ ಪ್ರತ್ಯಕ್ಷವಾಗಿ ನಾಟ್ಯವೆಸ ಗುತ್ತಿರುವುದನ್ನು ಕಂಡು ಅವಳು ಕೌತುಕಗೊಂಡಳು. ಸಿರಿಯಲ್ಲಿ ಸೌಖ್ಯದ ಸೋಪಾನವೆಂಬ ಹಿರಿಯರ ನಲ್ನುಡಿಯ ಸತ್ಯವನ್ನು ಅರಣ್ಯಜೀವನದಲ್ಲಿ ಕಂಡಳು.

ಹೀಗೆ ದಿನಗಳು ಆಹ್ಲಾದಕರಗಳಾಗಿ ಸುಖದಾಯಕಗಳಾಗಿ ಸಾಗು ತ್ತಿದ್ದುವು.

---

## ಹದಿಮೂರು

ಓಬಲ ತನ್ನ ಕಿರಿಯ ತಮ್ಮನನ್ನು ಇಲ್ಲವಾಗಿಸಲು ಕೈಗೊಂಡ ಹಂಚಿಕೆ ವೃದ್ಧ ಸೇವಕ ನರಸಜ್ಜನ ಪ್ರಯತ್ನದಿಂದ ವಿಫಲವಾಗಿ ಹೋಯಿತು. ಅವನು ಆಳುಗಳನ್ನು ಅಟ್ಟಿ ಕಾಡಿನಲ್ಲೆಲ್ಲಾ ಅಪ್ಪಾಜಿಯನ್ನೂ ನರಸಜ್ಜನನ್ನೂ ಹುಡು ಕಿಸಿದ. ಆದರೆ ವೃದ್ಧಸೇವಕನೊಡನೆ ಹುದುಗೂರು ಅರಣ್ಯದ ಹಾದಿಯನ್ನು ಹಿಡಿದ ಅಪ್ಪಾಜಿ ಅಣ್ಣನ ಆಳುಗಳ ದೃಷ್ಟಿಗೆ ಬೀಳಲಿಲ್ಲ. ಅವರು ತಮ್ಮ ಪ್ರಯತ್ನದಲ್ಲಿ ಕೃತಕೃತ್ಯರಾಗದೆ ಓಬಲನ ಮಂದಿರಕ್ಕೆ ಮರಳಿದರು.

ಅನಿತರಲ್ಲಿ ನಾಡನ್ನಾಳುವ ದೊರೆ ವೀರವರ್ಮನ ಆಸ್ಥಾನದಿಂದ ದೂತರು ಓಬಲನ ಎಡೆಗೈದಿದರು. ಅವರು ತಡಮಾಡದೆ ರಾಜಸನ್ನಿಧಾನಕ್ಕೆ ಬಂದು

ನಿಮ್ಮ ಮುಖ ತೋರಿಸಬೇಕೆಂದು ದೊರೆಗಳ ಅಪ್ಪಣೆಯಾಗಿದೆ” ಎಂದು ರಾಜಾಜ್ಞೆಯನ್ನು ಅವನಿಗೆ ತಿಳಿಸಿದರು.

ದೊರೆಯ ಸ್ವಭಾವವನ್ನು ಬಲ್ಲ ಓಬಲ ರಾಜಸನ್ನಿಧಿಯಲ್ಲಿ ತನ್ನನ್ನು ಹೊಸ ವಿಪತ್ತೊಂದು ಇದಿರುನೋಡುತ್ತಿದೆ ಎಂದು ಶಂಕಿಸಿದ. ಕಾಣೆಯಾದ ತನ್ನ ತಮ್ಮನ ವಿಚಾರ ಪ್ರಸ್ತಾವಿಸಲೆಂದೇ ರಾಜ ತನ್ನನ್ನು ಓಲಗಕ್ಕೆ ಆಗಮಿಸಲು ಆಣತಿಗೈದಿರುವನೆಂದು ಅವನು ಊಹಿಸಿದ. ಅವನ ಚಿತ್ತ ಭಯಶಂಕೆಗಳ ಕೇಳೀರಂಗವಾಯಿತು. ಅವನು ರಾಜದೂತರ ಬೆನ್ನಹಿಂದೆ ರಾಜಸನ್ನಿಧಿಗೆ ತೆರಳಿದ.

ಓಬಲ ರಾಜದರ್ಶನ ಮಾಡಿದಾಗ, ಅರಸನು ಪ್ರಸನ್ನಚಿತ್ತನಾಗಿರಲಿಲ್ಲ. ಮುನಿಸು ಅವನ ಮೊಗದಮೇಲೆ ಕುಣಿದಾಡುತ್ತಿದ್ದಿತು. ಅಪ್ಪಾಜಿಯ ಮೇಲೆ ಇದ್ದ ದ್ವೇಷ ಈಗ ಅವನ ಅಣ್ಣನ ಮೇಲೆ ಹೊರಳಿತು. ಅವನು ಕಠಿಣ ಸ್ವರದಲ್ಲಿ “ನಿನ್ನ ತಮ್ಮ ಅಪ್ಪಾಜಿಯೆಲ್ಲಿ?” ಎಂದು ಪ್ರಶ್ನಿಸಿದ.

“ಪ್ರಭೂ, ಈ ಮೊದಲೆ ದೂತರ ಮೂಲಕ ತಮ್ಮ ಸನ್ನಿಧಾನಕ್ಕೆ ನಿವೇದಿಸಿದ್ದೇನೆ” ಓಬಲ ದೊರೆಯ ಅಡಿಗಳಿಗೆರಗಿ ಭಯಭಕ್ತಿಗಳು ಬೆರೆತ ಸ್ವರದಲ್ಲಿ ಅರಿಕೆಮಾಡಿದ. “ಅಂದು ಮಲ್ಲಯುದ್ಧದಲ್ಲಿ ಭಾಗವಹಿಸಲೆಂದು ರಾಜಾಸ್ಥಾನಕ್ಕೆ ತೆರಳಿದವನು ನನ್ನ ಮಂದಿರಕ್ಕೆ ಮರಳಿ ಬರಲೇ ಇಲ್ಲ. ಏನಾದ? ಎಲ್ಲಿ ಹೋದ? ಎಂಬುದನ್ನು ನಾನರಿಯೆ. ಆಳುಗಳನ್ನು ಅಟ್ಟಿ ಅವನನ್ನು ನಾಡಿನಲ್ಲೆಲ್ಲಾ ಅರಸಿದೆ. ಆದರೆ ಅವರ ಪ್ರಯತ್ನ ಜಯಪ್ರದವಾಗಲಿಲ್ಲ. ಅವನೇನಾದರೂ ಗಾಳಿಯಲ್ಲಿ ಕರಗಿ ಹೋದನೋ? ಎಂದು ನನಗೆ ಆಶ್ಚರ್ಯವಾಗುತ್ತಿದೆ.”

“ನಿನ್ನ ನುಡಿಗಳೆಲ್ಲ ಸಟೆಯಾಗಿವೆ.” ವಿರಸ ಸ್ವರದಲ್ಲಿ ದೊರೆ ಮಾರ್ನುಡಿದ. “ನಾನು ಕರುಣೆಯಿಲ್ಲದವನಾಗಿದ್ದರೆ, ಇಷ್ಟರಲ್ಲೇ ನಿನ್ನ ರುಂಡ ಮುಂಡದಿಂದ ಬೇರೆಯಾಗುತ್ತಿದ್ದಿತು; ನೋಡು, ನಿನ್ನ ಸೋದರ ಎಲ್ಲಿದ್ದರೂ ಸರಿಯೆ, ಅವನನ್ನು ಹುಡುಕಿ ಆಸ್ಥಾನಕ್ಕೆ ಕರೆತರಲೇಬೇಕು. ಕೈಯಲ್ಲಿ ಹಣತೆ ಹಿಡಿದುಕೊಂಡು ಕಾಡುನಾಡುಗಳಲ್ಲಿ ಅರಸು. ಇನ್ನು ಹನ್ನೆರಡು ತಿಂಗಳ ಗಡು ಇದೆ. ಈ ಅವಧಿಯಲ್ಲಿ ಅವನನ್ನು ಜೀವಂತವಾಗಿಯಾದರೂ ಸರಿಯೇ,—ಅಥವಾ ಅವನ ರುಂಡವನ್ನಾದರೂ ಸರಿಯೆ, ನನ್ನ ಸನ್ನಿಧಿಗೆ ತಂದು ತೋರಬೇಕು. ಈ ಕಾರ್ಯ ನಿನ್ನಿಂದ ಸಾಧ್ಯವಾಗದಿದ್ದರೆ, ನನ್ನ ಸೀಮೆಯೊಳಗೆ ಅಡಿಯಿರಿಸ

ಕೂಡದು. ನಿನ್ನ ಜಹಗೀರಿಯನ್ನು ಮತ್ತು ನಿನ್ನದೆನಿಸಿದ ಸರ್ವಸಂಪತ್ತುಗಳನ್ನು ರಾಜಭಂಡಾರಕ್ಕೆ ಸೇರಿಸಿಕೊಳ್ಳಲಾಗುವುದು."

"ಆ ಪೋರನ ವಿಷಯದಲ್ಲಿ ನನ್ನ ವರ್ತನೆಯೇನಾಗಿತ್ತೆಂಬುದು ತಮ್ಮ ಸನ್ನಿಧಾನಕ್ಕೆ ವೇದ್ಯವಿದೆ". ಓಬಲ ಮರಳಿ ಬಿನ್ನಹ ಮಾಡಿದ. "ಆದುದರಿಂದ ನನ್ನ ಮೇಲೆ ಇಂತಹ ಕ್ರೂರಾಜ್ಞೆಯನ್ನು ಹೊರಿಸಲಾಗದು. ದೀನನ ಮೇಲೆ ಕೃಪೆದೋರಬೇಕು."

"ನೀನು ನಿನ್ನ ತಮ್ಮನನ್ನು ನಿನ್ನ ಮಂದಿರದಿಂದ ಓಡಿಸಿದೆ." ದೊರೆ ಓಬಲನನ್ನು ಮುನಿಸಿನಿಂದ ಗದರಿಸಿದ. "ಈಗ ನಾನು ನಿನ್ನನ್ನು ನನ್ನ ರಾಜ್ಯದಿಂದ ಓಡಿಸುತ್ತೇನೆ. ನಿನ್ನ ಶುಷ್ಕಾಲಾಪಗಳನ್ನು ಕೇಳಲು ನನಗೆ ಬಿಡುವಿಲ್ಲ. ಯಾರಲ್ಲಿ?"

ಅರಸನ ನುಡಿಗೇಳಿ ಈರ್ವರು ಪಸಾಯ್ತರು ರಾಜಸನ್ನಿಧಿಗೆ ಬಂದರು. ಅರಸನು, "ಈ ನೀಚನನ್ನು ಆಸ್ಥಾನದಿಂದ ಹೊರದೂಡಿರಿ. ಅವನ ಜಹಗೀರಿಯನ್ನು ಮತ್ತು ಸರ್ವಸಂಪತ್ತುಗಳನ್ನು ಮುಟ್ಟುಗೋಲು ಹಾಕಿ ಬೊಕ್ಕಸಕ್ಕೆ ಸೇರಿಸಿಕೊಳ್ಳಿರಿ!" ಎಂದು ಆಜ್ಞಾಪಿಸಿದ.

ಪಸಾಯ್ತರು ಓಬಲನ ಕೊರಳಿಗೆ ಕೈಹಾಕಿ ಅರಸನ ಓಲಗದಿಂದ ಹೊರದೂಡಿದರು. ಅವನು ಅವಮಾನ ತಿರಸ್ಕಾರಗಳ ಕೆಸರಿನಿಂದ ಆವೃತನಾಗಿ ಓಲಗಸಾಲೆಯಿಂದ ಹೊರಬರಬೇಕಾಯಿತು.

ರಾಜಾಸ್ಥಾನದಲ್ಲಿ ಓಬಲನಿಗಾದ ಅವಮಾನ ತಿರಸ್ಕಾರಗಳು ಅವನ ಮನಸ್ಸಿನಲ್ಲಿ ಅಪ್ಪಾಜಿಯ ಮೇಲಿದ್ದ ಕೋಪಾನಲನಿಗೆ ಎಣ್ಣೆಯನ್ನು ಎರೆದುವು. ಅವನು ತನ್ನ ಕಷ್ಟದುರಿತಗಳಿಗೆಲ್ಲ ಅಪ್ಪಾಜಿಯೇ ಕಾರಣಭೂತನೆಂದು ನಿರ್ಧರಿಸಿದ. ತಮ್ಮ ಕಾಡಿನಲ್ಲಿರಲಿ, ನಾಡಿನಲ್ಲಿರಲಿ ಅಥವಾ ನೆಲದ ಬಸಿರನ್ನು ಬಗೆದು ಭೂಗರ್ಭವನ್ನು ಸೇರಿರಲಿ,—ಅವನನ್ನು ಹುಡುಕಿ ಅವನ ಮಸ್ತಕವನ್ನು ತನ್ನ ಕರವಾಳಕ್ಕೆ ಆಹುತಿಗೊಡುವೆನೆಂದು ಓಬಲ ಉಗ್ರಪ್ರತಿಜ್ಞೆಯನ್ನು ಮಾಡಿದ. ತಮ್ಮನ ಕೊರಳನ್ನು ತರಿದು, ನೆತ್ತರುಬಸಿವ ರುಂಡವನ್ನು ತಂದು ದೊರೆಗೆ ತೋರಿಸಿ, ತನ್ನ ಸಿರಿಯನ್ನು ಅರಸನಿಂದ ಮರಳಿ ಪಡೆವೆನೆಂದು ತೀರ್ಮಾನಿಸಿದ.

ತಮ್ಮ ಅಪ್ಪಾಜಿಯನ್ನು ಕೊಲೆಗೈಯುವೆನೆಂದು ಪೂಣ್ದ ಓಬಲ ಉಟ್ಟ ಉಡುಗೆಯಲ್ಲಿ ತಮ್ಮನನ್ನು ಹುಡುಕಲೋಸುಗ ಹೊರಟ. ಅವನ ಕೈಯಲ್ಲಿ ಅಪ್ಪಾಜಿಯ ರಕ್ತವನ್ನು ಕುಡಿಯಲು ತವಕಗೊಂಡಿದ್ದ ಕರವಾಳವಿತ್ತು.

ಅವನು ಹಳ್ಳಿಗಳನ್ನೆಲ್ಲಾ ಸುತ್ತಿದ. ಬಯಲುಗಳನ್ನು ದಾಟಿದ. ಗುಡ್ಡಗಳನ್ನು ಏರಿದ. ಕಣಿವೆಗಳನ್ನು ಇಳಿದ. ತೊರೆಗಳನ್ನು ಹಾಯ್ದ. ಸಂತೆಗಳಲ್ಲಿ ಅಲೆದಾಡಿದ. ಪೇಟೆಗಳಲ್ಲಿ ಸಂಚರಿಸಿದ. ಕಾಡುಗಳಲ್ಲಿ ತಿರುಗಿದ. ಮೇಡುಗಳನ್ನೇರಿ ಆಯಾಸಗೊಂಡ.

ಆದರೆ ತಾನು ಅರಸುತ್ತಿರುವ ಅಪ್ಪಾಜಿ ಅವನ ಕಣ್ಣುಗಳಿಗೆ ಬೀಳಲಿಲ್ಲ. ಅವನುಟ್ಟ ವಸ್ತ್ರಗಳು ಕೊಳೆತುಂಬಿ ಮಾಸಿ ಕಪ್ಪಾದುವು. ಅಂಗಿ ಅಲ್ಲಲ್ಲಿ ಹರಿಯಿತು. ಕೇಶರಾಜಿ ಧೂಳುತುಂಬಿ ಜಡೆಗಟ್ಟಿತು. ಮೋರೆಯ ಮೇಲೆ ಬೆರಳುದ್ದ ಗಡ್ಡ ಬೆಳೆಯಿತು. ಕಲ್ಲುಮುಳ್ಳುಗಳನ್ನು ತುಳಿದು ಅವನ ಪಾದಗಳು ಹುಣ್ಣಾದುವು. ಕಾಲುಗಳು ಸೊರಗಿದುವು. ಕೈಕೈಗಳು ಬೆಂಡಾದುವು. ಆಹಾರ ದೊರೆಯದುದರಿಂದ ಪುಷ್ಟವಾದ ಅವನ ದೇಹ ಕೃಶವಾಯಿತು.

ಆರು ತಿಂಗಳು ಸಾಗಿದುವು. ಆದರೂ ಓಬಲನ ಸಂಚಾರ ಕೊನೆಗೊಳ್ಳದು. ಸಂತೆ ಪೇಟೆಗಳಲ್ಲಿ; ಬೇಸಾಯಗಾರರ ಗುಡಿಸಲುಗಳಲ್ಲಿ; ತೊರೆ ನದಿ ತಟಾಕಗಳ ತೀರಗಳಲ್ಲಿ ಅಪ್ಪಾಜಿ ಗೋಚರಿಸಲಿಲ್ಲ. ಓಬಲನ ಸಂಚಾರ ಜೀವನ ಕೊನೆಗೊಳ್ಳಲಿಲ್ಲ.

ರಾಜ್ಯಭ್ರಷ್ಟ ದೊರೆ ಹುದುಗೂರು ಕಾನನದಲ್ಲಿ ತನ್ನ ಪರಿವಾರದೊಡನೆ ವಾಸಿಸುತ್ತಿದ್ದಾನೆಂದು ಓಬಲ ಜಟ್ಟಿ ಚೆಲುವಯ್ಯನಿಂದ ಕೇಳಿತಿಳಿದಿದ್ದ. ಅಪ್ಪಾಜಿ ಹುದುಗೂರು ಕಾಡನ್ನು ಸೇರಿ ಪದಚ್ಯುತ ಅರಸನ ಆಶ್ರಯವನ್ನು ಪಡೆದಿರಬಹುದೆಂಬ ಶಂಕೆ ಓಬಲನ ಮನಸ್ಸಿನಲ್ಲಿ ತಲೆದೋರಿತು. ಅವನು ದುರ್ಭೇದ್ಯವಾದ ಹುದುಗೂರು ಅಡವಿಯೊಳಗೆ ಪ್ರವೇಶಿಸಿ, ತನ್ನ ಉದ್ದೇಶವನ್ನು ಸಾಧಿಸಬೇಕೆಂದು ಸಂಕಲ್ಪಮಾಡಿದ.

ಓಬಲನ ಕಾಲುಗಳು ಹುದುಗೂರು ವಿಪಿನದ ಹಾದಿಯನ್ನು ಹಿಡಿದುವು. ಅವನು ಕಾಡೊಳಗೆ ನುಗ್ಗಿ ಬರುವುದನ್ನು ಮರಗಳ ಕೊಂಬೆಗಳ ಮೇಲಿದ್ದ ಕೋಗಿಲೆಗಳು ನೋಡಿದುವು. ಅವು ಸೋದರ ದ್ರೋಹಕ್ಕಿಂತ ಹಿರಿಯ ಪಾಪ ಬೇರೊಂದಿಲ್ಲ—ಅವನು ನೆಲದಾಯಿಗೆ ಭಾರ! ಎಂದು ಸವಿಗೊರಳಲ್ಲಿ ಹಾಡಿದುವು. ಹರಿಣಗಳು ಓಬಲನಿಗೆ ಅಡ್ಡವಾದುವು. ಅವು ಸೋದರ ಘಾತುಕನ ಮೋರೆಯನ್ನು ನಿಟ್ಟಿಸುವುದು ಸಹ ಪಾಪವೆಂದು ಬಗೆದು, ಅವನನ್ನು ನೋಡದೆ ಕಾಡೊಳಗೆ ನುಗ್ಗಿದುವು. ಪೊದೆಯೊಳಗೆ ಅವಿತಿರುವ ಹುಲಿ ಓಬಲನನ್ನು ನೋಡಿತು. ಆದರೆ "ಈತ ತಮ್ಮನನ್ನು ಕೊಲ್ಲಲು ಹೊರಟ ಮಹಾ

ಪಾಪಿ. ಇವನ ಮಾಂಸವನ್ನುಂಡು ಜೀರ್ಣಿಸಿಕೊಳ್ಳಲಾರೆ." ಎಂದು ಹೇಳುತ್ತಾ ಅವನ ಮೇಲೆರಗದೆ ಸುಮ್ಮನಾಯಿತು. ಮರದ ಟೊಂಗೆಗಳ ಮೇಲೇರಿದ್ದ ಕರಡಿ ಓಬಲನನ್ನು ನಿಟ್ಟಿಸಿತು. ಅದು, "ಈ ಪಾಪಿ ಸೋದರ ಹತ್ಯೆಗೆ ಹೊರ ಟವನು. ಅವನ ಮೆದುಳನ್ನು ಮೆದ್ದರೆ,—ಆ ಪಾಪಿಯು ಆಲೋಚನೆಗಳೆಲ್ಲ ನನ್ನ ಬುದ್ಧಿಗೆ ಅಂಟಿ ನನಗೆ ಹುಚ್ಚುಹಿಡಿಸಬಹದು." ಎಂದು ಆಲೋಚಿಸುತ್ತಾ ಅವನ ಮೇಲೆ ಬಿದ್ದ ದೃಷ್ಟಿಯನ್ನು ಬೇರೆಕಡೆ ಹೊರಳಿಸಿತು.

ಹೀಗೆ ಕಾಡಿನ ಜಂತುಗಳೆಲ್ಲ ಓಬಲನ ಗೊಡವೆಗೆ ಹೋಗದೆ ಅವನನ್ನು ಬಿಟ್ಟು ದೂರ ಸರಿದುವು.

---

## ಹದಿನಾಲ್ಕು

ಒಂದು ದಿನ ಅಪ್ಪಾಜಿ ಹೂವಯ್ಯನ ಗುಡಿಸಲಿಗೆ ತೆರಳಿ, ಅಲ್ಲಿ ತಾನು ದಿನನಿತ್ಯ ಆಚರಿಸುತ್ತಿದ್ದ ಪ್ರೇಮಾಭಿನಯದ ಅಣಕವನ್ನು ಮುಗಿಸಿ,-ತನ್ನ ವಾಸಸ್ಥಾನಕ್ಕೆ ಮರಳುತ್ತಿದ್ದ. ಅವನು ಮಧ್ಯಾಹ್ನದ ನಂತರ ಮರಳಿ ಬರುವೆ ನೆಂದು ಹೇಳಿ ಹೂವಯ್ಯನನ್ನು ಬೀಳ್ಕೊಂಡಿದ್ದ. ಅವನ ಹೆಗಲಿನಲ್ಲಿ ಬಿಲ್ಲಿದ್ದಿತು. ಬೆನ್ನ ಮೇಲೆ ಸರಳುಗಳು ತುಂಬಿದ್ದ ದೊಣೆಯಿದ್ದಿತು. ಹೀಗೆ ಬೇಡನ ವೇಷವನ್ನು ತೊಟ್ಟ ಅಪ್ಪಾಜಿ ಹೂವಯ್ಯನ ಕುಟೀರದಿಂದ ಮರಳುತ್ತಿದ್ದ. ದಾರಿ ಘೋರಾರಣ್ಯವನ್ನು ಇಬ್ಭಾಗವಾಗಿ ಸೀಳಿ ಮುಂದುವರಿಯುತ್ತಿದ್ದಿತು. ಹುಲಿ ಕರಡಿ ತೋಳ ಮೊದಲಾದ ಕ್ರೂರ ಪ್ರಾಣಿಗಳಿಗೆ ಸಂಕೇತಸ್ಥಾನ ವೆನಿಸಿದ ಅಪಾಯಕರ ಪ್ರದೇಶವದು. ಯಾವ ಗಳಿಗೆಯಲ್ಲಿ ಪಕ್ಕದ ಪೊದೆ ಗಳಿಂದ ಹುಲಿ ತೋಳಗಳು ಪ್ಮೈಮೇಲೆ ಬೀಳುವುವೆಂಬುದನ್ನು ಹೇಳಲಾಗು ತ್ತಿರಲಿಲ್ಲ. ಆದುದರಿಂದ ಅಪ್ಪಾಜಿ ಎಡಬಲಗಳ ಪೊದೆಗಳ ಮೇಲೆ ದೃಷ್ಟಿ ಯನ್ನು ಓಡಿಸುತ್ತಾ ಮುಂದೆ ಅಡಿಗಳನ್ನಿರಿಸುತ್ತಿದ್ದ.

ಸ್ವಲ್ಪ ದೂರ ಅಪ್ಪಾಜಿ ಹೋದಾಗ, ಒಬ್ಬ ಮನುಷ್ಯ ಒಂದು ಹೆಮ್ಮರದ ನೆರಳಿನಲ್ಲಿ ಮಲಗಿ ನಿದ್ರಿಸುತ್ತಿರುವುದು ದೃಗ್ಗೋಚರವಾಯಿತು. ಅವನ

ಕೊರಳಿಗೊಂದು ಕಾಳಸರ್ಪ ಸುತ್ತಿಕೊಂಡು ಅವನ ನೆತ್ತಿಯ ಮೇಲೆ ಹೆಡೆ ಯಾಡಿಸುತ್ತಿದ್ದಿತು. ಅವನೆದುರಿಗಿರುವ ಪೊದೆಯಲ್ಲಿ ಅವಿತಿದ್ದ ಹೆಬ್ಬುಲಿ, ಕಾಳಸರ್ಪ ಮನುಷ್ಯನನ್ನು ಬಿಟ್ಟು ತೊಲಗಿದೊಡನೆಯೇ ತಾನು ಅವನ ಮೇಲೆ ಬೀಳುವೆನೆಂದು ಹೊಂಚುಹಾಕುತ್ತಿದ್ದಿತು. 'ಇತ್ತ ಪುಲಿ ಅತ್ತ ದರಿ' ಎಂಬ ಗಾದೆಯಂತೆ ಆ ವ್ಯಕ್ತಿ ಭೀಕರ ಗಂಡಾಂತರಕ್ಕೊಳಗಾಗಿದ್ದ.

ತನಗೊದಗಿದ ಆಪತ್ತುಗಳ ಪರಿವೆಯಿಲ್ಲದೆ ಮಲಗಿ ನಿದ್ರಿಸುವ ವ್ಯಕ್ತಿ ಯಾರೆಂದು ಅಪ್ಪಾಜಿ ನಿಟ್ಟಿಸಿ ನೋಡಿದ. ಅವನು ತೊಟ್ಟ ವಸ್ತ್ರಗಳು ಹರಿದು ಚಿಂದಿಚಿಂದಿಯಾಗಿದ್ದುವು. ತಲೆಗೂದಲು ದೂಳಿನಿಂದ ತುಂಬಿ ಜಡೆಗಟ್ಟಿದ್ದಿತು. ಮೊಗದಲ್ಲಿ ಗೇಣುದ್ದದ ಗಡ್ಡ ತುಂಬಿಕೊಂಡಿತ್ತು. ಅವನ ಪಕ್ಕದಲ್ಲಿ ಒರೆಯಿಂದ ತೆಗೆದ ಖಡ್ಗವಿದ್ದಿತು. ಮೊದಲು ಅಪ್ಪಾಜಿಗೆ ಮಲಗಿ ನಿದ್ರಿಸುವ ವ್ಯಕ್ತಿಯ ಗುರುತು ಆಗಲಿಲ್ಲ. ನಿಧಾನವಾಗಿ ಅವನ ಪರಿಚಯವಾಯಿತು.

ಮರದಡಿಯಲ್ಲಿ ತನಗೊದಗಿದ ಗಂಡಾಂತರದ ಪರಿವೆಯಿಲ್ಲದೆ, ಎರಡು ವಿಪತ್ತುಗಳ ಕತ್ತರಿಯಲ್ಲಿ ಸಿಲುಕಿ ನಿದ್ರೆ ಮಾಡುತ್ತಿದ್ದ ಆ ವ್ಯಕ್ತಿ ಬೇರೆ ಯಾರೂ ಆಗಿರಲಿಲ್ಲ. ಅವನು ಅಪ್ಪಾಜಿಯ ಅಣ್ಣ ಓಬಲ; ತನಗೆ ವಿದ್ಯಾಬುದ್ಧಿಗಳನ್ನು ಕಲಿಸದೆ ಜೀತದಾಳಿಗಿಂತಲೂ ನಿಕೃಷ್ಟ ರೀತಿಯಲ್ಲಿ ನಡೆಸಿಕೊಂಡ ಓಬಲ; ಆಸ್ಥಾನದ ಮಲ್ಲ ಚೆಲುವಯ್ಯನಿಗೆ ಪ್ರೇರಣೆಯನ್ನು ನೀಡಿ ಕೊಲ್ಲಲು ಹವಣಿಸಿದ ಓಬಲ; ತನ್ನ ಶಯ್ಯಾಗೃಹಕ್ಕೆ ಕಿಚ್ಚನ್ನಿಕ್ಕಿ ತನ್ನನ್ನು ಜೀವಸಹಿತ ಸುಟ್ಟು ಭಸ್ಮ ಮಾಡಲುದ್ಯುಕ್ತನಾದ ಸೋದರ ಘಾತಕ ಓಬಲ! ಅಷ್ಟರಿಂದಲೂ ತೃಪ್ತನಾಗದೆ ತನ್ನನ್ನು ಸಂಹರಿಸಲೆಂದು ಪಣತೊಟ್ಟು ಕಾಡಿಗೆ ಬೆಂಬತ್ತಿ ಬಂದ ಓಬಲ!

ಅಪ್ಪಾಜಿಯ ಚಿತ್ತ ವಿವಿಧ ಚಿಂತೆಗಳ ಮಲ್ಲಸಾಲೆಯಾಯಿತು. ಓಬಲ ತನಗೆ ಮಾಡಿದ ಪ್ರತಿಯೊಂದು ಅನ್ಯಾಯ, ಪ್ರತಿಯೊಂದು ದ್ರೋಹ ಭೀಮಾ ಕಾರಗಳನ್ನು ತಾಳಿ ಅವನ ಕಣ್ಣಮುಂದೆ ನಿಂತುವು. "ಓಬಲ ವಂಚಕ, ದ್ರೋಹಿ, ಘಾತಕ, ಸಹೋದರ ಹತ್ಯೆಗೆ ಉದ್ಯುಕ್ತನಾದ ಪಾಪಾತ್ಮ! ಅವನು ಕೈಕೊಂಡ ಪಾಪಕಾರ್ಯಗಳನ್ನು ನೋಡಿ, ಅವನು ತುಳಿದ ಅಧರ್ಮ ಮಾರ್ಗವನ್ನು ಕಂಡು ರೋಷಗೊಂಡು ವಿಧಿಯೇ ಈ ಪ್ರತೀಕಾರವನ್ನು ಎಸಗಲು ಉದ್ಯುಕ್ತವಾಗಿದೆ! ಅವನಿಗೊದಗಿದ ಸಂಕಟವನ್ನು ನಿವಾರಿಸಲು ನೀನೇಕೆ ಕೈಯೆತ್ತಬೇಕು? ಕಾಳೋರಗ ಕಡಿಯಲಿ; ಹಸಿದ ಹೆಬ್ಬುಲಿ ಅವನನ್ನು

ಸಿಗಿದುಹಾಕಲಿ. ಪಾಪಿಗೆ ತಕ್ಕ ಶಾಸ್ತಿಯಾಯಿತು! ಭೂಮಾತೆಯ ಭಾರ ಒಂದಿಷ್ಟು ಕಡಿಮೆಯಾದೀತು! ಚಿಂತೆಗೆ, ಮರುಕಕ್ಕೆ ಇಲ್ಲಿ ಒಂದಿಷ್ಟು ಅವಕಾಶವಿಲ್ಲ. ಮುಂದೆ ನಡೆ"

ಎಂದು ಅಪ್ಪಾಜಿಯ ಬುದ್ಧಿ ಹೇಳಿತು. ಅವನು ಯುಕ್ತಿವಾದದ ಪ್ರೇರಣೆಗೊಳಗಾದ. ಅವನು ವಿಪತ್ತುಗಳ ದವಡೆಯಲ್ಲಿ ಸಿಲುಕಿದ ಓಬಲ ನನ್ನು ಅವನ ಪಾಡಿಗೆ ಬಿಟ್ಟು ನಾಲ್ಕು ಹಜ್ಜೆ ಮುಂದೆ ಇರಿಸಿದ.

ಆದರೆ ಅಪ್ಪಾಜಿಯ ಎದೆಯೊಳಗಿಂದ ಇನ್ನೊಂದು ದನಿ ಕೇಳಿಬರ ತೊಡಗಿತು. ಅವನು ಆ ಒಳದನಿಯನ್ನು ಕಿವಿಗೊಟ್ಟು ಆಲಿಸತೊಡಗಿದ.

"ಅಪ್ಪಾಜಿ, ನೀನು ಮಾಡುವುದಾದರೂ ಏನು?" ಅಪ್ಪಾಜಿಯ ಅಂತರ್ವಾಣಿ ನುಡಿಯಿತು. "ಆಪತ್ತಿನ ತೆಕ್ಕೆಯಲ್ಲಿ ಸಿಲುಕಿದ ಸೋದರನನು ಅವನ ಪಾಡಿಗೆ ಬಿಟ್ಟು ನೀನು ಮುಂದೆ ನಡೆದರೆ ನಿನ್ನ ಒಳ್ಳೆಯತನಕ್ಕೆ ಯಾವ ಬೆಲೆಯಿದೆ? ನಿನ್ನ ಅಣ್ಣ ನಿನಗೆ ದ್ರೋಹಮಾಡಿದ. ಈಗ ನೀನು ಅವನ ಸಾವನ್ನು ಬಯಸುತ್ತಿರುವೆ. ನಿನಗೂ ಅವನಿಗೂ ಯಾವ ಅಂತರವಿದೆ? ನಿನ್ನ ನಾಡಿಗಳಲ್ಲಿ ಹರಿಯುವಂತೆ ಅವನ ದೇಹದಲ್ಲಿಯೂ ಮಾಲೂರು ರಾಚಯ್ಯನ ರಕ್ತ ಹರಿಯುತ್ತಿದೆ. ಅವನ ದೇಹದ ರಕ್ತವನ್ನು ಹೊರ ಚೆಲ್ಲಿದರೆ ನಿನ್ನ ದೇಹದ ನೆತ್ತರನ್ನು ಬಸಿದಂತೆಯೇ ಸರಿ!"

"ಆದರೆ ಅವನು ಕೇಡಿಗ. ನಿನ್ನ ಜೀವ ಹೀರಲು ಬಯಸಿದ ದ್ರೋಹಿ" ಬುದ್ಧಿ ನುಡಿಯಿತು. "ಅವನಿಗೆ ಉಪಕಾರ ಮಾಡುವುದೆಂದರೆ ಹಾವಿಗೆ ಹಾಲೆರೆದಂತೆ".

"ಪಾಪಿಯನ್ನು ದೂರಗೊಳಿಸುವುದರಲ್ಲಿ ಏನೂ ವಿಶೇಷವಿಲ್ಲ." ಅಂತರಂಗ ವಾದಿಸಿತು. ಪಾಪದ ಹಾದಿಯನ್ನು ತುಳಿದವರಲ್ಲಿ ಸಹ ಕರುಣೆದೋರುವುದು ಹಿರಿಮೆ".

"ಅವನು ನಿನ್ನ ಜೀವ ತೆಗೆಯಲು ಬಯಸಿ ಈ ಕಾಡಿಗೆ ಬಂದಿದ್ದಾನೆ".

"ಆದರೆ ಅವನು ನಿನ್ನಣ್ಣ. ನಿನ್ನಂತೆಯೇ ಒಬ್ಬ ಮಾನವ".

"ನೀನೀಗ ಅವನಿಗೊದಗಿದ ಗಂಡಾಂತರವನ್ನು ಪರಿಹರಿಸಲು ಹೊರಟರೆ, ನೀನು ನಿನ್ನ ಮೇಲೆಯೇ ಸಂಕಟ ಎತ್ತಿ ಹಾಕಿಕೊಂಡಂತೆ".

"ಹೆರವರ ಸಂಕಟ ನಿವಾರಣೆಗೋಸ್ಕರ ತನ್ನ ಪ್ರಾಣವನ್ನು ಪಣವೊಡ್ಡು ವುದು ದೊಡ್ಡವರ ಲಕ್ಷಣ."

ಹೀಗೆ ಬುದ್ಧಿ ಭಾವನೆಗಳೆರಡು ಅಪ್ಪಾಜಿಯ ಚಿತ್ತದಲ್ಲಿ ತುಮುಲ ಸಮರ ವನ್ನೆಸಗಿದುವು. ಕೊನೆಗೆ ಬುದ್ಧಿಗೆ ಸೋಲಾಯಿತು. ಭಾವನೆ ವಿಜಯ ವನ್ನು ಗಳಿಸಿತು. ಅಪ್ಪಾಜಿ ಮುಂದಿರಿಸಿದ ಅಡಿಗಳನ್ನು ಹಿಂದೆಗೆದ. ಅವನು ತನ್ನ ಸೋದರ ಮಲಗಿ ನಿದ್ರಿಸುವ ಎಡೆಗೆ ಮರಳಿಬಂದ.

ಓಬಲ ಇನ್ನೂ ನಿದ್ದೆಯಲ್ಲೇ ಇದ್ದ. ಕಾಳಸರ್ಪ ಅವನ ದೇಹವನ್ನು ಬಿಟ್ಟು ಕದಲಿರಲಿಲ್ಲ. ಅದು ಇನ್ನೂ ಅವನ ನೆತ್ತಿಯ ಮೇಲೆ ಹೆಡೆಯಾಡಿಸು ತ್ತಿದ್ದಿತು. ಅಣ್ಣನನ್ನು ಕರೆದು ಎಚ್ಚರಿಸುವೆನೆಂದು ಅಪ್ಪಾಜಿ ಆಲೋಚಿಸಿದ. ಆದರೆ ನಿದ್ರಿಸುವ ವ್ಯಕ್ತಿ ತನ್ನ ದೇಹವನ್ನು ನಸು ಅಲುಗಿಸಿದರೆ ಸಾಕು; ಹೆಡೆ ಯೆತ್ತಿದ ಸರ್ಪ ಓಬಲನನ್ನು ಕುಟುಕುವುದು; ಅವನ ಪ್ರಾಣಾಪಹಾರವನ್ನು ಎಸಗುವುದು! ಅಪ್ಪಾಜಿ ಕಾಳಸರ್ಪವನ್ನು ನಿಟ್ಟಿಸುತ್ತಾ ಕೈಯಲ್ಲಿ ಖಡ್ಗವನ್ನು ಹಿರಿದು ನಿಂತ. ಸರ್ಪ ಓಬಲನನ್ನು ಕುಟುಕಿ ಅವನ ಪ್ರಾಣವನ್ನು ತೆಗೆಯ ಲಿಲ್ಲ. ಅದು ತನ್ನ ಮುಂದೆ ಅಪ್ಪಾಜಿಯನ್ನು ಕಾಣಲು ಓಬಲನ ಕೊರಳನ್ನು ಬಳಸಿದ ಸುರುಳಿಗಳನ್ನು ಬಿಚ್ಚಿ, ಓಬಲನ ಮೈಯನ್ನು ಬಿಟ್ಟು ಮೆಲ್ಲನೆ ಹರಿದು ಪಕ್ಕದ ಪೊದೆಯನ್ನು ಸೇರಿತು. ತನ್ನ ಅಣ್ಣನ ನೆತ್ತಿಯ ಮೇಲೆ ಬಿಚ್ಚು ಗತ್ತಿಯಂತೆ ತೂಗುತ್ತಿದ್ದ ಒಂದು ಕಂಟಕ ಪರಿಹಾರವಾಯಿತೆಂದು ಅಪ್ಪಾಜಿ ಅರಿತ.

ಹಾವು ಓಬಲನ ಮೈಯನ್ನು ತ್ಯಜಿಸಿ ದೂರಹೋದುದನ್ನು ಪೊದೆ ಯೊಳಗಿದ್ದ ಹೆಬ್ಬುಲಿ ನೋಡಿತು. ಅದು ಮರುಕ್ಷಣದಲ್ಲಿಯೇ ಆರ್ಭಟಿಸುತ್ತಾ ಓಬಲನ ಮೇಲೆ ನೆಗೆಯಿತು. ಅಪ್ಪಾಜಿ ಕತ್ತಿಯನ್ನು ಹಿರಿದು, ಅಣ್ಣನ ಮೇಲೆ ನೆಗೆದ ಹುಲಿಯನ್ನು ತಡೆಯಲು ಸಿದ್ಧನಾಗಿ ಮುಂದೆ ನೆಗೆದ; ಅವನು ಅಳುಕದೆ ವ್ಯಾಘ್ರಕ್ಕೆ ಅಡ್ಡಲಾಗಿ ನಿಂತ.

ತನ್ನ ಬೇಟೆಗೆ ಬೇರೊಬ್ಬ ಮನುಷ್ಯ ತಡೆಯಾಗಿ ಬಂದು ನಿಂತುದನ್ನು ಕಂಡು ಹುಲಿ ರೋಷಾಕುಲವಾಯಿತು. ಅದು ಇಮ್ಮಡಿ ಕೋಪದಿಂದ ಗರ್ಜಿಸುತ್ತಾ ಅಪ್ಪಾಜಿಯ ಮೇಲೆರಗಿತು. ರೋಷ ಭೀಷಣ ವ್ಯಾಘ್ರದ ಭೀಕರ ಗರ್ಜನೆ ಅಪ್ಪಾಜಿಯ ಕೆಚ್ಚೆದೆಯನ್ನು ಅಳುಕಿಸಲಿಲ್ಲ. ಅವನು ಖಡ್ಗವನ್ನು ಬೀಸುತ್ತಾ ಹುಲಿಯ ಮೇಲೆ ಬಿದ್ದ. ಅವನು ಕರವಾಳವನ್ನು ಮೇಲೆತ್ತಿ ಹುಲಿಯನ್ನು ಅಪ್ಪಳಿಸಿದ. ಕತ್ತಿಯ ಹೊಡೆತದಿಂದ ಹುಲಿಗೆ ಗಾಯವಾಯಿತು. ನೋವಿನಿಂದ ಅದು ಇನ್ನೊಮ್ಮೆ ಗರ್ಜಿಸಿತು. ಅದು

ತನ್ನ ಮುಂಗೈಗಳನ್ನೆತ್ತಿ ಅಪ್ಪಾಜಿಯನ್ನು ಅಪ್ಪಳಿಸಿತು. ಈ ಆಘಾತವನ್ನು ತಡೆಯಲಾಗದೆ ಅವನು ನೆಲದ ಮೇಲೆ ಕುಸಿದು ಬಿದ್ದ. ಹುಲಿಯ ಉಗುರುಗಳ ಬಗಿತದಿಂದ ಅವನ ತೋಳುಗಳಲ್ಲಿ ಗಾಯಗಳಾದುವು. ಗಾಯಗಳಿಂದ ನೆತ್ತರ ಕಾರಂಜಿ ಚಿಮ್ಮತೊಡಗಿತು. ವ್ಯಾಘ್ರರಾಜ ನೆಲದ ಮೇಲೆ ಹೊರಳಿದ ಹಗೆಯನ್ನು ಸೀಳಿ ಹಾಕಬೇಕೆಂದು ಮುಂದಡಿಯಿಟ್ಟ. ಅನಿತರಲ್ಲಿ ಅಪ್ಪಾಜಿ ಬಿದ್ದಲ್ಲಿಂದ ಎದ್ದು ನಿಂತ; ಹಿಡಿತದಿಂದ ತಪ್ಪಿ ಕೆಳಗುದುರಿದ ಖಡ್ಗವನ್ನು ಹೆಕ್ಕಿಕೊಂಡು ಹಗೆಯ ಮೇಲೆ ಏರಿಹೋದ.

ಈ ಹುಲುಮನುಷ್ಯನ ಕೆಚ್ಚನ್ನೂ ಅದಟನ್ನೂ ಕಂಡು ಹುಲಿಗೂ ಅಚ್ಚರಿಯೆನಿಸಿತು. ಅದರ ಅಂತರಂಗದಲ್ಲಿ ಭಯದ ಅಲೆಯೊಂದು ಸುಳಿದಾಡಿತು. ಅದು ಎರಡು ಹಜ್ಜೆಗಳನ್ನು ಹಿಂದಿರಿಸಿತು. ಕೆಂಡಗಳನ್ನು ಕಾರುತ್ತಿರುವ ಕಣ್ಣುಗಳಿಂದ ಅಪ್ಪಾಜಿಯ ಮೋರೆಯನ್ನೇ ಒಮ್ಮೆ ದಿಟ್ಟಿಸಿ ನೋಡಿತು. ಹಗೆಯ ಮೇಲೆ ಇನ್ನೊಮ್ಮೆ ಎರಗಲು ಅಣಿಯಾಯಿತು. ಅನಿತರಲ್ಲಿ ಅಪ್ಪಾಜಿ ಮುಂದಡಿಗಳನ್ನಿರಿಸಿದ. ಕರವಾಳದಿಂದ ಹುಲಿಯ ಮಸ್ತಕದ ಮೇಲೆ ಅಪ್ಪಳಿಸಿದ. ಆ ಪ್ರಹಾರ ಗುರಿತಪ್ಪಲಿಲ್ಲ. ಹುಲಿಯ ನೆತ್ತಿಯ ಮೇಲೆ ದೊಡ್ಡದೊಂದು ಗಾಯವಾಯಿತು. ಗಾಯದಿಂದ ಧಾರಾಕಾರವಾಗಿ ನೆತ್ತರು ಸೋರತೊಡಗಿತು. ಹುಲಿ ರೋಷದಿಂದ ಹಗೆಯ ಮೇಲೆ ನೆಗೆಯಿತು. ಅಪ್ಪಾಜಿ ಎರಡು ಹಜ್ಜೆ ಪಕ್ಕಕ್ಕೆ ಸರಿದು ವ್ಯಾಘ್ರದ ಆಘಾತದಿಂದ ಪಾರಾದ. ದೊಡ್ಡದೊಂದು ಬಂಡೆಗಲ್ಲು ಉರುಳಿದಂತೆ ಅದು ನೆಲಕ್ಕೆ ಉರುಳಿತು. ವ್ಯಾಘ್ರರಾಜ ಮೇಲೆದ್ದು ಮರಳಿ ತನ್ನ ಕಡೆಗೆ ತಿರುಗುವ ಮುನ್ನ ಅಪ್ಪಾಜಿ ಚಟುಲಗತಿಯಿಂದ ಹುಲಿಯ ಮೇಲೆ ಹಾರಿದ. ತನ್ನ ಕರವಾಳವನ್ನೆತ್ತಿ ಹುಲಿಯ ಬೆನ್ನ ಮೇಲೆ ಭೀಮಶಕ್ತಿಯಿಂದ ಅಪ್ಪಳಿಸಿದ. ಈ ಪ್ರಬಲ ಪ್ರಹಾರ ಹುಲಿಯ ಬೆನ್ನೆಲುಬನ್ನು ತುಂಡರಿಸಿತು.

ಹೆಬ್ಬುಲಿ ಭೀಷಣ ಗರ್ಜನೆಯನ್ನೆಸಗುತ್ತಾ ಮೇಲೇಳಲು ಪ್ರಯತ್ನಿಸಿತು. ಆದರೆ ಬೆನ್ನ ಮೂಳೆ ಮುರಿದುದರಿಂದ ಎದ್ದು ನಿಲ್ಲಲಾಗಲಿಲ್ಲ. ಆದರೂ ಅದು ಮರಣವೇದನೆಯಲ್ಲಿ ತನ್ನ ಸರ್ವಶಕ್ತಿಗಳನ್ನು ಉಪಯೋಗಿಸಿ ಮೇಲೆದ್ದಿತು; ಅದು ಅಪ್ಪಾಜಿಯ ಮೇಲೆ ನೆಗೆಯಿತು. ಈ ನೆಗೆತದಿಂದ ತಪ್ಪಿಸಿಕೊಳ್ಳಲು ಅವನಿಗೆ ಶಕ್ಯವಾಗಲಿಲ್ಲ. ದೊಡ್ಡ ಮರದ ತೊಲೆಯಂತೆ ಅದು ಅವನ ಮೈಮೇಲೆ ಬಿದ್ದಿತು. ಅದು ಅಗಲವಾದ ಬಾಯನ್ನು ತೆರೆದು ಕರಾಳ ದಂಷ್ಟ್ರಗಳಿಂದ ಹಗೆಯ ಮೊಗವನ್ನು ಸೀಳಲು ಉದ್ಯುಕ್ತವಾಯಿತು.

ಹುಲಿಯ ಕ್ರೂರ ದಾಡೆಗಳಿಂದ ತಾನು ಉಳಿಯಲಾರೆನೆಂದು ಅಪ್ಪಾಜಿಗೆ ಅನಿಸಿತು. ಸಹೋದರನ ಜೀವರಕ್ಷಣೆಗೋಸ್ಕರ ಪ್ರಾಣ ತೆರುವೆನೆಂಬ ಕೃತಾರ್ಥತೆ-ಸಂತೃಪ್ತಿಗಳು ಆತನ ಹೃದಯದಲ್ಲಿ ಸಂಜಾತವಾದುವು. ಈ ವಿಷಮ ಪರಿಸ್ಥಿತಿಯಲ್ಲಿಯೂ ಧೈರ್ಯ ಅವನನ್ನು ಬಿಟ್ಟು ತೊಲಗಲಿಲ್ಲ. ಬುದ್ಧಿ ತನ್ನ ಸ್ಥಿರತೆಯನ್ನು ಕಳೆದುಕೊಳ್ಳಲಿಲ್ಲ. ಅವನು ಎಡದ ತೋಳಿನಿಂದ ಎದೆಯ ಮೇಲೆ ಬಿದ್ದ ಹುಲಿಯನ್ನು ಮೇಲೆತ್ತಲು ಪ್ರಯತ್ನಿಸಿದ. ಆ ತೋಳಿಗೆ ರಾಕ್ಷಸ ಶಕ್ತಿ ಸಂಪ್ರಾಪ್ತವಾಯಿತು. ಅದು ಉಕ್ಕಿನ ತೊಲೆಯಂತೆ ದೃಢವಾಯಿತು. ಅವನು ಶರೀರದ ಸರ್ವಶಕ್ತಿಯನ್ನೂ ಉಪಯೋಗಿಸಿ ತೋಳನ್ನು ಮೇಲೆತ್ತಿದ; ಬಲಗೈಯಲ್ಲಿ ಹಿಡಿದಿದ್ದ ಖಡ್ಗವನ್ನು ಸರಿಪಡಿಸಿಕೊಂಡ; ಖಡ್ಗದ ತುದಿಯಿಂದ ಹುಲಿಯ ಎದೆಯನ್ನು ಇರಿದ. ಎರಡು ಕೈಗಳಿಂದಲೂ ಕರವಾಳವನ್ನು ಹುಲಿಯ ಎದೆಯೊಳಗೆ ಒತ್ತಿ ತಿವಿದ. ಖಡ್ಗ ಹುಲಿಯ ಹೃದಯವನ್ನು ಭೇದಿಸಿತು.

ಹುಲಿ ಮರಣ ವೇದನೆಯಿಂದ ಕೊನೆಯ ಗರ್ಜನೆಯನ್ನು ಮಾಡಿತು. ಆ ಭೀಕರ ಸ್ವನ ಕಾಡಿನ ಮರಗಳಲ್ಲೆಲ್ಲಾ ಮಾರುಲಿಗೊಂಡಿತು. ಬಾನಿನಲ್ಲಿ ತಲೆಯೆತ್ತಿ ನಿಂತ ಹೆಮ್ಮರಗಳು ಸಹ ಈ ಭೀಷಣ ನಾದವನ್ನು ಕೇಳಿ ಕಂಪಿಸಿದುವು. ಮರುಕ್ಷಣದಲ್ಲಿಯೇ ಪ್ರಾಣಪಕ್ಷಿ ಹುಲಿಯ ಹೃದಯಪಂಜರವನ್ನು ತೊರೆದು ಆಕಾಶದಲ್ಲಿ ಹಾರಿತು. ಉಸಿರಿಲ್ಲದ ಒಡಲು ನೆಲದ ಮೇಲೆ ಹೊರಳಿತು.

---

## ಹದಿನೈದು

ಅಪ್ಪಾಜಿ ಹುಲಿಯೊಡನೆಸಗಿದ ಕಾಳಗದ ಕೋಲಾಹಲ ನಿದ್ರಾಮಗ್ನನಾದ ಓಬಲನನ್ನು ಜಾಗ್ರತಗೊಳಿಸಿತು. ಅವನು ಎಚ್ಚತ್ತು ಎದ್ದು ಕುಳಿತ. ಅವನ ಕಣ್ಣುಗಳಿಗೆ ಬಿದ್ದ ನೋಟ ಭೀತಿಯಿಂದ ಅವನ ಮೈನವಿರೇಳಿಸಿತು. ಮನುಷ್ಯನೊಬ್ಬ ಏಕಾಂಗಿಯಾಗಿ ಹುಲಿಯೊಡನೆ ಕಾದಾಡುತ್ತಿದ್ದಾನೆ! ಈ ಕೆಚ್ಚೆದೆಯ ಕಲಿ ಯಾರೆಂದು ಅವನು ನಿಟ್ಟಿಸಿನೋಡಿದ. ಅರೆಕ್ಷಣದಲ್ಲಿಯೇ ಅವನ ಪರಿಚಯ ಆಯಿತು. ತಾನು ಯಾರನ್ನು ಕೊಲ್ಲಬೇಕೆಂದು ಆರು

ತಿಂಗಳು ಕಾಲ ಕಾಡುಮೇಡುಗಳಲ್ಲಿ ಅಲೆದಾಡಿದೆನೋ, ಆ ಅಪ್ಪಾಜಿ ಅವನ ಕಣ್ಣಮುಂದೆ ಹೆಬ್ಬುಲಿಯೊಡನೆ ಹೋಣರುತ್ತಿದ್ದ. ಹುಲಿಯೊಡನೆ ಅಪ್ಪಾಜಿ ಕಾದಾಡಲು ಕಾರಣವೇನೆಂಬುದನ್ನು ಊಹಿಸುವುದು ಓಬಲನಿಗೆ ಪ್ರಯಾಸ ವೆನಿಸಲಿಲ್ಲ. ತಾನು ನಿದ್ರಿಸುತ್ತಿದ್ದಾಗ,—ಹುಲಿ ತನ್ನ ಮೇಲೆ ಬೀಳಲು ಉದ್ಯುಕ್ತವಾಗಿರಬೇಕು; ಆ ದಾರಿಯಲ್ಲಿ ದಾಟುತ್ತಿದ್ದ ಅಪ್ಪಾಜಿ, ತನಗೆ ಒದಗಿದ ವಿಪತ್ತನ್ನು ಕಂಡು,—ಅವನ ಪ್ರಾಣವನ್ನು ಪಣವೊಡ್ಡಿ ತನ್ನ ಜೀವವನ್ನು ರಕ್ಷಿಸಲು ಉದ್ಯುಕ್ತನಾಗಿರಬೇಕು,—ಎಂದು ಓಬಲ ಊಹಿಸಿದ.

ಆಗ ಓಬಲನ ಮನೋರಂಗದಲ್ಲಿ ಉದಿಸಿದ ಭಾವನೆಗಳನ್ನು ವರ್ಣಿಸಲ ಳವಲ್ಲ. ಅವನ ಈ ತನಕದ ಬಾಳುವೆಯೆಲ್ಲ ಅಪ್ಪಾಜಿಯ ಮೇಲಿನ ಮಾತ್ಸರ್ಯದಿಂದ ನಿಬಿಡವಾಗಿದ್ದಿತು. ಮರಣಶಯ್ಯೆಯಲ್ಲಿ ಕೊನೆಯುಸಿರು ಬಿಡುತ್ತಿದ್ದ ತನ್ನ ಪೂಜ್ಯ ತಂದೆಗೆ ಮಾಡಿದ ವಾಗ್ದಾನದಂತೆ ಅಪ್ಪಾಜಿಗೆ ವಿದ್ಯಾಬುದ್ಧಿಗಳನ್ನು ಕಲಿಸಿ ಅವನನ್ನು ಸುಸಂಸ್ಕೃತನನ್ನಾಗಿ ಮಾಡಲಿಲ್ಲ. ಅವನಿಗೆ ಮನೆಯಲ್ಲಿ ನ್ಯಾಯವಾದ ಸ್ಥಾನಮಾನಗಳನ್ನು ಕೊಡದೆ ಜೀತದಾಳಿಗಿಂತಲೂ ನಿಕೃಷ್ಟವಾಗಿ ನಡೆಸಿಕೊಂಡ; ಆಸ್ಥಾನದ ಮಲ್ಲ ಚೆಲುವಯ್ಯನಿಗೆ ಚಾಡಿಹೇಳಿ ತಮ್ಮನ ಕೊರಳನ್ನು ಮುರಿಯಲು ಪ್ರಯತ್ನಿಸಿದ; ತಮ್ಮನ ಸಜ್ಜೆ ಮನೆಗೆ ಕಿಚ್ಚನ್ನಿಕ್ಕಿ ಅವನನ್ನು ಭಸ್ಮಮಾಡಲು ಹವಣಿಸಿದ; ಕೊನೆಗೆ ರಾಜಾಜ್ಞೆಯನ್ನು ಮಸ್ತಕದಲ್ಲಾಂತು, ತಮ್ಮನ ರುಂಡವನ್ನು ತರಿದುತರುವೆನೆಂದು ಪಣ ತೊಟ್ಟು ಕಾಡುಮೇಡುಗಳಲ್ಲಿ ದೇಸಿಗನಂತೆ ಅಲೆದ— ಹೀಗೆ ಓಬಲ ಒಡಹುಟ್ಟಿದಾತನಿಗೆ ಬಗೆದ ಕೇಡುಗಳು ಒಂದೆರಡಲ್ಲ ಮಾಡಿದ ಅನ್ಯಾಯಗಳು ಅಗಣಿತ. ತಮ್ಮನಲ್ಲಿ ತೋರಿಬರುವ ಒಳ್ಳೆಯತನವೇ ಈ ಮಾತ್ಸರ್ಯ ವಿದ್ವೇಷಗಳಿಗೆ ಕಾರಣ!

ಹುಟ್ಟು ಹಗೆಯಂತಿರುವ ತನಗೆ,—ಪರಿಪರಿಯಿಂದ ಕಾಡಿ ತೊಳಲಿಸಿದ ತನಗೆ,—ಅಪ್ಪಾಜಿ ಮಾಡಿದ ಪ್ರತೀಕಾರವೇನು? ಅವನು ತನ್ನ ಜೀನನಪಥದಲ್ಲಿ ಮುಳ್ಳಿನಂತಿದ್ದ ತನ್ನನ್ನು ಸುಟ್ಟುರುಹಲು ಬಯಸಲಿಲ್ಲ. ಅಣ್ಣನ ರಕ್ತದಿಂದ ತನ್ನ ಕೃಪಾಣದ ಪಿಪಾಸೆಯನ್ನು ತಣಿಸಲು ಉದ್ದೇಶಿಸಲಿಲ್ಲ. ಸೋದರ ಹತ್ಯೆಯ ಹಾದಿಯನ್ನು ಹಿಡಿದು ತನ್ನ ಕೈಗಳನ್ನು ಪಾಪಕಲುಶಿತಗಳನ್ನಾಗಿ ಮಾಡಲು ಉದ್ಯುಕ್ತನಾಗಲಿಲ್ಲ ಪ್ರತಿಯಾಗಿ ಹುಲಿಯ ಬಾಯಿಗೆ ತುತ್ತಾಗಲಿರುವ ತನ್ನ ಅಣ್ಣನ ಪ್ರಾಣವನ್ನು ಕಾಪಾಡಲೆಂದು ತನ್ನ ಜೀವದ ಹಂಗು

ತೊರೆದು ಕಾದಿ ಪ್ರಾಣದಾನಗೈವುದೇ ಅವನ ಪ್ರತೀಕಾರದ ಮಾರ್ಗವಾಯಿತು.

ಬಲ್ಲಿದರು ತಮ್ಮ ಹಗೆಗಳಿಗೂ ಸಹ ಒಳ್ಳಿದನ್ನೇ ಮಾಡುವರೆಂಬುದು ಪ್ರಾಜ್ಞರ ನುಡಿ. ಈ ಮಾತು ಅಪ್ಪಾಜಿಯಲ್ಲಿ ಪ್ರತ್ಯಕ್ಷವಾಗಿ ಗೋಚರಿಸಿತು. ಗುಣವಂತರು ಹಗೆಗಳಿಗೂ ಕೇಡನ್ನು ಬಯಸರು. ಅಪ್ಪಾಜಿ ಗುಣಶಾಲಿ; ಆದುದರಿಂದಲೇ ತನಗೆ ನೂರಾರು ದ್ರೋಹಗಳನ್ನು ಬಗೆದ ಅಣ್ಣನ ಪ್ರಾಣವನ್ನು ರಕ್ಷಿಸಲು ಮುಂದಾದ!

ಹೀಗೆ ಹಲವು ಬಗೆಯ ಭಾವನೆಗಳ ಕದಿರುಗಳು ಓಬಲನ ಚಿತ್ತದಲ್ಲಿ ಉದಿಸಿದುವು; ತಮ್ಮ ಪ್ರಭೆಯನ್ನು ಹರಹಿದುವು. ಆಗತಾನೇ ಉದಯಿಸಿದ ವಿವೇಕಸೂರ್ಯ ಓಬಲನ ಅಂತರಂಗವನ್ನು ಮುಸುಕಿದ್ದ ತಿಮಿರವನ್ನು ನಿವಾರಿಸಿದ. ಅವನ ಅಂತರಂಗದಲ್ಲಿ ಜ್ಞಾನದೀಪ್ತಿ ತನ್ನ ಕಾಂತಿಯನ್ನು ಹರಹಿತು. ಓಬಲ ತನ್ನ ಅಜ್ಞತೆ ಅಲ್ಪತೆಗಳನ್ನು ಅರಿತ. ತಾನು ಮಾಡಿದ ನೂರಾರು ಅಪರಾಧಗಳ ಅರಿವಾಯಿತು. ಅವನ ಹೃದಯ ಪಶ್ಚಾತ್ತಾಪದಗ್ಧವಾಯಿತು. ಅಂತರಂಗದಲ್ಲಿ ಆವಿರ್ಭಾವಗೊಂಡ ಪಶ್ಚಾತ್ತಾಪಾಗ್ನಿ, ಅವನಲ್ಲಿ ಮೊಳೆತು ದಟ್ಟವಾಗಿ ಪಸರಿದ್ದ ಅಜ್ಞಾನ ಮಾತ್ಸರ್ಯ ವಿದ್ವೇಷಗಳೆಂಬ ಮುಳ್ಳುಪೊದೆಗಳನ್ನು ಸುಟ್ಟುರುಹಿತು. ಅವನ ತಿಳುವಿನ ಕಣ್ಣುಗಳು ತೆರೆದುವು.

ಓಬಲನಿಗೆ ಹೊಸ ದೃಷ್ಟಿ ಪ್ರಾಪ್ತವಾಯಿತು. ತನಗೊದಗಿದ ನೂತನ ದೃಷ್ಟಿಯಲ್ಲಿ ಅವನು ಪ್ರಪಂಚವನ್ನು ನೋಡಿದ. ಆಗ ಅವನಿಗೆ ಜಗತ್ತು ವಿನೂತನವಾಗಿ ಸುಂದರವಾಗಿ ಗೋಚರಿಸಿತು. ಮಾತ್ಸರ್ಯವಿದ್ವೇಷಗಳಿಗೆ ಎಡೆಯಿಲ್ಲದ ಅಹಂಕಾರ ಗರ್ವಗಳ ಸೋಂಕಿಲ್ಲದ, ಪ್ರೇಮ ದಯೆ ವಾತ್ಸಲ್ಯಗಳಿಗೆ ಆಸರೆಯೆನಿಸಿದ ದಿವ್ಯ ಪ್ರಪಂಚವನ್ನು ಅವನು ಅವಲೋಕಿಸಿದ. ಅಲ್ಲಿ ತಾನು–ಪರರು ಎಂಬ ಕವಲು ಭಾವನೆಗೆ ಎಡೆಯಿಲ್ಲ. ಈ ನೂತನ ಸೃಷ್ಟಿಯ ದರ್ಶನದಿಂದ ಅವನ ಕಣ್ಣುಗಳಿಂದ ಅಶ್ರುಸ್ರೋತ ಪ್ರವಹಿಸಿತು. ನೇತ್ರಗಳಿಂದ ಹರಿದ ಬಾಷ್ಪಾಂಬುಗಳ ಅಭಿಷೇಕ ಅವನ ಆತ್ಮಕ್ಕೆ ಅಂಟಿಕೊಂಡಿದ್ದ ಪಾಪಪಂಕವನ್ನು ತೊಳೆಯಿತು. ಆತ ಕಣ್ಣೀರ ಧಾರೆಯಲ್ಲಿ ಮಿಂದು ಪುನೀತನಾದ.

ಹುಲಿಯೊಡನೆ ಸೆಣಸುವ ತಮ್ಮನಿಗೆ ನೆರವಾಗಿ ಅವನ ಜೀವರಕ್ಷಣೆಯನ್ನೆಸಗುವುದು ತನ್ನ ಪ್ರಥಮ ಕರ್ತವ್ಯವೆಂದು ಓಬಲ ಎಣಿಸಿದ. ಆದುದರಿಂದ ನೆಲದ ಮೇಲಿದ್ದ ಕರವಾಳವನ್ನು ಎತ್ತಿಕೊಂಡು ಅಪ್ಪಾಜಿಯ ನೆರವಿಗೆ

ದ್ರುತಗತಿಯಿಂದ ಓಡಿದ. ಆದರೆ ಅನಿತರಲ್ಲಿ ಅಪ್ಪಾಜಿ ಹುಲಿಯನ್ನು ಸದೆದು ಯಮಲೋಕಕ್ಕೆ ಕಳುಹಿದ್ದ. ಆದರೆ ಗಾಯಗಳಿಂದ ಸುರಿದ ರಕ್ತಧಾರೆ, ದೇಹಶ್ರಮಗಳಿಂದ ಅವನಿಗೆ ಬವಳಿಬಂದು ಸ್ಮೃತಿ ತಪ್ಪಿ ನೆಲದ ಮೇಲೊರಗಿದ್ದ. ಪ್ರಜ್ಞಾಶೂನ್ಯನಾದ ತಮ್ಮನನ್ನು ಕಂಡು, ತನ್ನ ಜೀವರಕ್ಷಣೆಗೋಸ್ಕರ ಅವನೆಲ್ಲಿ ಪ್ರಾಣತೆತ್ತನೋ ಎಂಬ ಭಯಶಂಕೆಗಳು ಅಣ್ಣನ ಎದೆಯಲ್ಲಿ ಮೂಡಿದುವು. ಅವನು ಅಪ್ಪಾಜಿಯ ಎದೆ ಮುಟ್ಟಿ ನೋಡಿದ. ಮೈ ಬೆಚ್ಚಗಿದ್ದಿತು; ಎದೆಗುಂಡಿಗೆ ಬಡೆಯುತ್ತಿದ್ದಿತು; ತಮ್ಮನ ಪ್ರಾಣಕ್ಕೇನೂ ಅಪಾಯವಾಗಿಲ್ಲ. ಅವನು ಯುದ್ಧಶ್ರಮದಿಂದ ಆಯಾಸಗೊಂಡು ಮೈಮರೆತಿರುವನೆಂದು ಓಬಲ ತಿಳಿದ.

ಓಬಲ ತಾನುಟ್ಟ ಪಂಚೆಯ ತುದಿಗಳನ್ನು ಹರಿದು ತಮ್ಮನ ಗಾಯಗಳಿಗೆ ಕಟ್ಟಿ ನೆತ್ತರು ಹರಿವುದನ್ನು ನಿಲ್ಲಿಸಿದ. ಕಾಡಿನಲ್ಲಿ ನೀರಬುಗ್ಗೆಯೊಂದನ್ನು ಅರಸಿ ಮುತ್ತುಗದೆಲೆಗಳನ್ನು ದೊನ್ನೆಮಾಡಿ ನೀರು ತಂದ. ಅವನು ಅಪ್ಪಾಜಿಯ ನೆತ್ತಿ ಮೊಗಗಳಿಗೆ ತಣ್ಣೀರೆರಚಿದ; ಗಿಡದಿಂದ ತಳಿರೆಲೆಗಳುಳ್ಳ ತೊಂಗಲೊಂದನ್ನು ಕಿತ್ತುತಂದು, ತಮ್ಮನಿಗೆ ಗಾಳಿಹಾಕಿದ.

ಓಬಲನೆಸಗಿದ ಶೈತ್ಯೋಪಚಾರಗಳು ಅಪ್ಪಾಜಿ ಮರಳಿ ಸ್ಮೃತಿಯನ್ನೈದುವಂತೆ ಮಾಡಿದುವು. ಅವನು ಮೆಲ್ಲನೆ ಕಣ್ಣುಗಳನ್ನು ತೆರೆದುನೋಡಿದ. ಓಬಲ ಗಾಳಿಹಾಕುವ ದೃಶ್ಯ ಅವನಿಗೆ ಗೋಚರಿಸಿತು. ಅವನು ಆಯಾಸಪೂರ್ಣ ಸ್ವರದಲ್ಲಿ "ನೀರು-ನೀರು" ಎಂದು ಮೆಲ್ಲನೆ ಉಸುರಿದ.

ಓಬಲ ದೊನ್ನೆಯಲ್ಲಿ ತುಂಬಿದ್ದ ನೀರನ್ನು ಗುಟುಕು ಗುಟುಕಾಗಿ ತಮ್ಮನ ಬಾಯಿಗೆರೆದ. ಅಪ್ಪಾಜಿ ನಿಧಾನವಾಗಿ ಬಾಯಿಗೆರೆದ ನೀರನ್ನು ಕುಡಿದ. ಶೀತಲ ಸ್ವಾದೋದಕ ಅವನ ದಣಿವನ್ನು ಹಗುರಗೊಳಿಸಿತು. ಶ್ರಮಪೀಡಿತ ದೇಹಕ್ಕೆ ನವಚೈತನ್ಯವನ್ನು ಪ್ರದಾನಮಾಡಿತು. ಅವನು ಮೆಲ್ಲನೆ ಎದ್ದು ಕುಳಿತ.

"ತಮ್ಮ, ಅಪ್ಪಾಜಿ ನಿನಗೆ ದ್ರೋಹ ಬಗೆದ ಪಾಪಿ ನಾನು!" ಎಂದು ಓಬಲ ತಮ್ಮನ ಪಾದಗಳಲ್ಲಿ ಹೊರಳಿದ. "ನನ್ನ ಅಪರಾಧಗಳು ಅನಂತವಾಗಿವೆ. ನೀನು ನನ್ನನ್ನು ಮನ್ನಿಸು!"

"ಅಣ್ಣಾ, ಹಿರಿಯನಾದ ನೀನು ನನಗೆರಗುವುದೆ?" ತನ್ನ ಪಾದಗಳ ಮೇಲಿದ್ದ ಅಣ್ಣನ ಮಸ್ತಕವನ್ನು ಅಪ್ಪಾಜಿ ಮೇಲಕ್ಕೆತ್ತಿದ. "ನೀನು ಪಿತೃಸಮಾನನು ಎರಗಬೇಕಾದವನು ನಾನು."

"ಅಪ್ಪಾಜಿ, ಜನನದಿಂದ ಹಿರಿಯನು ನಾನೆಂಬುದು ನಿಜ" ಓಬಲ ನುಡಿದ. "ಅರಿವಿನಲ್ಲಿ ಹಿರಿಯ ನೀನು. ನಿನ್ನ ಜ್ಞಾನವಿವೇಕಗಳು ನನ್ನಲ್ಲಿ ಇಲ್ಲವಾದುವು. ನಾನು ನಿನಗೆ ಎಸಗಿದ ಕೇಡುಗಳನ್ನು ಹೇಳಿಕೊಳ್ಳಲು ಬಾಯಿಬರುವುದಿಲ್ಲ. ನಿನ್ನನ್ನು ಕಾಡಿಗಟ್ಟಿದ ಮತ್ತು ನಿನ್ನ ಜೀವಹರಣ ಮಾಡಲು ಪಣತೊಟ್ಟ ನಾನು ಯಾವ ಬಾಯಿಯಿಂದ ನನ್ನನ್ನು ಕ್ಷಮಿಸೆಂದು ಬೇಡಿಕೊಳ್ಳಲಿ!"

"ಅಣ್ಣ, ಆದುದು ಆಗಿಹೋಯಿತು." ಪಶ್ಚಾತ್ತಾಪದಗ್ಧನಾದ ಅಣ್ಣನನ್ನು ಸ್ವಾಂತನಗೊಳಿಸುತ್ತಾ ಅಪ್ಪಾಜಿ ಉಸುರಿದ.

"ಅಂದು ನೀನಲ್ಲ ಕಾಡಿದುದು, ನನ್ನ ದುರ್ದೈವ ಕಾಡಿತೆಂದು ಎಣಿಸುತ್ತೇನೆ. ಪಶ್ಚಾತ್ತಾಪವೆಂಬ ಗಂಗಾಜಲದಲ್ಲಿ ಮಿಂದು ಪುನೀತನಾದ ನಿನ್ನನ್ನು ನೋಡಿ, ನನಗೆ ಹೊಸ ಅಣ್ಣನೊಬ್ಬ ದೊರಕಿದನೆಂದು ಹಿಗ್ಗುತ್ತೇನೆ. ನಮ್ಮ ಜೀವನದ ಆ ಹಳೆಯ ಹಾಳೆಗಳನ್ನು ಮುಚ್ಚಿಬಿಡುವ; ಹೊಸ ಹಾಳೆಗಳನ್ನು ತೆರೆಯುವ. ಬಾ, ನನ್ನನ್ನು ಆಲಿಂಗಿಸು. ಸ್ವರ್ಗವನ್ನು ಸೇರಿದ ನಮ್ಮ ತಂದೆಯ ಆತ್ಮಕ್ಕೆ ಸಂತೋಷವಾಗುವಂತೆ ನಾವು ಇನ್ನುಮುಂದೆ ಜೀವಿಸುವ."

ಎಂದು ಅಪ್ಪಾಜಿ ತೋಳುಗಳನ್ನು ಚಾಚಿ ಅಣ್ಣನ ಕೊರಳನ್ನು ಬಿಗಿಯಪ್ಪಿದ. ಓಬಲನ ತೋಳುಗಳು ತಮ್ಮನನ್ನು ಬಳಸಿದುವು. ಸೋದರರೀರ್ವರ ಮಧ್ಯದಲ್ಲಿದ್ದ ಒಡಕು ಪರಿಹಾರವಾಗಿ ಅವರು ಒಂದಾದರು. ಈ ಸೋದರರ ಐಕ್ಯತೆಯನ್ನು ಕಂಡು ಕಾಡಿನ ಗಿಡಬಳ್ಳಿಗಳು ಸಂತಸದಿಂದ ಹೂಗಳೆಂಬ ಎಳೆನಗೆಯನ್ನು ಸೂಸಿದುವು. ಹಕ್ಕಿಗಳು ಸೋದರಪ್ರೇಮದ ದಿವ್ಯತೆಯನ್ನು ಸಾರುವ ಗೀತೆಗಳನ್ನು ಮಧುರಸ್ವರದಲ್ಲಿ ಹಾಡಿದುವು.

"ಅಣ್ಣ, ಬಾ! ನನ್ನ ವಸತಿಗೆ ಹೋಗೋಣ." ಎಂದು ಅಪ್ಪಾಜಿ ಅಣ್ಣನನ್ನು ಕರೆದ. ಓಬಲ ತಮ್ಮನನ್ನು ಕೈಹಿಡಿದು ನಡೆಸಿದ. ಅಪ್ಪಾಜಿಗೆ ತ್ರಾಣ ಕುಂದಿದುದರಿಂದ ಅವರು ಬಹುಮೆಲ್ಲನೆ ನಡೆದುಕೊಂಡು ಹೋದರು. ಚೇತನವಿಲ್ಲದೆ ಬಳಕುತ್ತಿದ್ದ ಅಪ್ಪಾಜಿಯ ದೇಹಕ್ಕೆ ಅಣ್ಣನ ತೋಳೇ ಆಧಾರವಾಯಿತು.

ಅಪ್ಪಾಜಿ ಗವಿಯನ್ನು ತಲಪಿದಾಗ, ಗವಿಯ ಬಾಗಿಲಲ್ಲಿ ನರಸಜ್ಜ ಎದುರುಗೊಂಡ—ಗಾಯಗೊಂಡ ಧನಿಯನ್ನು ಕಂಡು ಅವನು ಭಯಸಂಭ್ರಾಂತನಾದ. ಅವನು, "ನನ್ನ ಕಿರಿದೊರೆಗೆ ಏನಾಯಿತು? ಯಾರೇನು

ಮಾಡಿದರು! ರಾಚಯ್ಯ ದೊರೆಯ ಕಣ್ಣಮಣಿಗೆ!" ಎಂದು ಉದ್ಗಾರವೆತ್ತಿದ.

ಮುದುಕನ ದೃಷ್ಟಿ ಓಬಲನತ್ತ ಹೊರಳಿತು. ಓಬಲನಲ್ಲಾದ ಪಶ್ಚಾತ್ತಾಪವನ್ನರಿಯದ ನರಸಜ್ಜ, ಆತನಿಂದಲೇ ತನ್ನ ಕಿರಿಯ ಧನಿಗೆ ಆಪತ್ತೊದಗಿರಬೇಕೆಂದು ಶಂಕಿಸಿದ. ಅವನ ಕಣ್ಣುಗಳು ಕ್ರೋಧದಿಂದ ಕೆಂಪಡರಿದುವು. ಅವನು "ಓಬಲಯ್ಯ, ನನ್ನ ಕಿರಿಯ ದೊರೆ ನಿಮ್ಮ ಗೊಡವೆ ಬೇಡವೆಂದು ಮನೆ ಮಠಗಳನ್ನು ತೊರೆದು ಕಾಡು ಸೇರಿದರೂ, ಹಿಂದಿನ ಜನ್ಮದ ಪಾಪ ಕರ್ಮದ ಫಲದಂತೆ ನೀವು ಬೆಂಬತ್ತಿ ಬಂದಿರುವಿರಿ.—ನೀವು ನನ್ನ ಕಿರಿ ದೊರೆಯ ಜಹಗೀರಿ, ಮನೆ ಮಠ, ಒಡವೆ ವಸ್ತುಗಳನ್ನು ತೆಗೆದುಕೊಳ್ಳಿರಿ. ಆದರೆ ಆತನ ಜೀವವೊಂದನ್ನು ಮುಟ್ಟದಿರಿ. ನಾನು ಮುದುಕ—ಆದರೂ ನಮ್ಮ ಜೀವವನ್ನು ಸೆರೆಯಿಂದ ಬಿಡಿಸಲು . . ." ಎಂದು ರೋಷದಿಂದ ಹೇಳಿದ.

"ನರಸಜ್ಜ, ನರಸಜ್ಜ—ಸ್ವಲ್ಪ ತಡೆ." ಎಂದು ಅಪ್ಪಾಜಿ ನಡುವೆ ಬಾಯಿ ಹಾಕಿ ಹೇಳಿದ.

"ನಾನೇಕೆ ತಡೆಯಲಿ. ನಿಮ್ಮ ಅಣ್ಣನೆಂದೆನಿಸಿಕೊಳ್ಳುವ ಇವರು ನಿಮಗೆ ಮಾಡಿದ ಕೇಡುಗಳನ್ನು ನೆನೆವಾಗ ನನ್ನ ನೆತ್ತರು ಕುದಿಯುವುದು. ಈಗ, ನಿಮಗೆ ಈ ಕೇಡನ್ನು . . . . ."

"ನರಸಜ್ಜ, ಈತ ನನ್ನ ಹಿಂದಿನ ಅಣ್ಣನಲ್ಲ. ನನ್ನ ಭಾಗ್ಯದಿಂದ ದೊರಕಿದ ಒಬ್ಬ ಹೊಸ ಅಣ್ಣ."

"ಅಂದರೆ— ಇವರು ನಿಮಗೆ ಕೇಡು ಮಾಡಲು ಬಂದವರಲ್ಲವೇ?" ವಿಸ್ಮಯ ಬೆರೆತ ದೃಷ್ಟಿಯಿಂದ ನರಸಜ್ಜ ಓಬಲನ ಮೋರೆಯನ್ನು ನೋಡಿದ.

"ನನ್ನ ತಮ್ಮನಿಗೆ ಕೇಡು ಬಗೆಯಲೆಂದೇ ನಾನು ಈ ಕಾಡಿಗೆ ಬಂದೆ." ಓಬಲ ಮಾತಾಡಿದ. "ಆದರೆ ದೈವ ನನ್ನ ಮೇಲೆ ದಯೆಯುಳ್ಳದು. ಆದುದರಿಂದ ಸೋದರ ಹತ್ಯೆಯ ಕ್ರೂರ ಕರ್ಮ ನನ್ನ ಕೈಯಿಂದ ಆಗಲಿಲ್ಲ. ದೈವ ನನ್ನನ್ನು ರಕ್ಷಿಸಿತು."

"ನರಸಜ್ಜ—ನನಗೆ ಈ ಹೊಸ ಅಣ್ಣ ಹೇಗೆ ದೊರೆತ ಎಂಬ ಕತೆಯನ್ನು ನೀನು ಆ ಮೇಲೆ ಕೇಳುವಿಯಂತೆ. ನಾನು ಹೆಚ್ಚು ಹೊತ್ತು ನಿಲ್ಲಲಾರೆ. ಒಳಗೆ ಹಾಸಿಗೆಯನ್ನು ಸರಿಪಡಿಸು." ಅಪ್ಪಾಜಿ ನುಡಿದ. "ನನ್ನ ಅಣ್ಣ ಹಸಿದಿದ್ದಾನೆ. ಅವನಿಗೆ ನೀನು ಕಾಡಿನಲ್ಲಿ ತಿರಿದು ತಂದ ಹಣ್ಣುಹಂಪಲುಗಳನ್ನು ಕೊಟ್ಟು ಉಪಚರಿಸು."

"ಹೌದು ನನ್ನ ದೊರೆ. ನಿಮ್ಮ ಉಪಚಾರವನ್ನು ನಾನು ಮರೆತಿದ್ದೆ." ಎಂದು ಹೇಳಿ ನರಸಜ್ಜ ಅಪ್ಪಾಜಿಯ ತಳಿರು ಹಾಸನ್ನು ಹೊಸ ಚಿಗು ರೆಲೆಗಳಿಂದ ಸಿದ್ಧಗೊಳಿಸಿದ. ಅಪ್ಪಾಜಿ ಹಾಸಿಗೆಯ ಮೇಲೆ ಹೊರಳುತ್ತಾ, ಆ ದಿನ ತಾನೆಸಗಿದ ಸಾಹಸವನ್ನೂ ತನ್ನ ಅಣ್ಣ ಪಶ್ಚಾತ್ತಾಪ ಶುದ್ಧನಾದ ಬಗೆ ಯನ್ನೂ ವಿವರಿಸಿದ.

ನರಸಜ್ಜ ತಂದಿತ್ತ ಹಣ್ಣುಹಂಪಲುಗಳು ಓಬಲನ ಹಸಿವೆಯನ್ನು ನೀಗಿ ದುವು. ಅವನು ನೆಲದ ಮೇಲೆ ಹೊರಳಿ ತನ್ನ ಆಯಾಸವನ್ನು ಪರಿಹರಿಸಿಕೊಂಡ.

"ಅಣ್ಣಾ, ಇತ್ತ ಬಾ" ಎಂದು ತಳಿರು ಹಾಸಿನಲ್ಲಿ ಮಲಗಿದ ಅಪ್ಪಾಜಿ ಅಣ್ಣನನ್ನು ಕರೆದ.

"ಏನು ಅಪ್ಪಾಜಿ?" ಎಂದು ಓಬಲ ತಮ್ಮನ ಹಾಸಿಗೆಯನ್ನು ಸಮಿಾಪಿಸಿದ.

"ನನಗೋಸ್ಕರ ಒಂದು ಸಣ್ಣ ಕೆಲಸವನ್ನು ಮಾಡುವೆಯಾ?"

"ಸಣ್ಣ ಕೆಲಸವೇಕೆ? ಯಾವ ಕೆಲಸವನ್ನಾದರೂ ಮಾಡುವೆನು."

"ನೋಡು, ಬಡಗದಿಕ್ಕಿನಲ್ಲಿ ಈ ಕಾಡಂಚಿನಲ್ಲಿ ಕುರುಬರ ಗುಡಿಸ ಲೊಂದಿದೆ. ಅಲ್ಲಿ ಹೂವಯ್ಯನೆಂಬ ಕುರುಬ ತನ್ನ ಸೋದರಿಯೊಡನೆ ವಾಸಿಸು ತ್ತಿದ್ದಾನೆ. ಅವನು ತನ್ನ ಆಪ್ತಮಿತ್ರರಲ್ಲೊಬ್ಬ. ನಾನು ಅವನನ್ನು ವಿನೋದ ಕ್ಕೋಸ್ಕರ ನೀಲಾಂಬಿಕೆಯೆಂದು ಕರೆಯುವೆನು. ನಾವಿಬ್ಬರೂ ಹೊತ್ತು ಕಳೆಯುವುದಕ್ಕೋಸ್ಕರ ಪ್ರೇಮಾಭಿನಯದ ನಾಟಕವನ್ನಾಡುವೆವು. ಇಂದು ಮಧ್ಯಾಹ್ನ ಅವನ ಗುಡಿಸಲಿಗೆ ಬರುವೆನೆಂದು ಮಾತುಕೊಟ್ಟಿದ್ದೆ. ಆದರೆ ನಾನು ಗಾಯಗಳಿಂದ ನಿತ್ರಾಣಗೊಂಡಿರುವುದರಿಂದ ಅಷ್ಟು ದೂರ ನಡೆಯ ಲಾರೆ. ಆದುದರಿಂದ ನೀನು ನನಗೊಂದು ಉಪಕಾರವೆಸಗಬೇಕು. ನೀನು ಹೂವಯ್ಯನಿಗೆ ರಕ್ತದಲ್ಲಿ ನೆನೆದ ಈ ವಸ್ತ್ರವನ್ನು ತೋರಿಸಿ, ನನಗೊದಗಿದ ಆಪತ್ತನ್ನು ಅರುಹಬೇಕು. ಹೇಳಿದ ಹೊತ್ತಿಗೆ ಬರಲಾಗದುದಕ್ಕೆ ಕ್ಷಮೆಯನ್ನು ಕೋರಿದೆನೆಂದು ತಿಳಿಸಬೇಕು."

"ಆಗಲಿ, ಅಪ್ಪಾಜಿ, ನೀನು ವಹಿಸಿದ ಕಾರ್ಯವನ್ನು ಸಂತೋಷದಿಂದ ಈಡೇರಿಸುವೆನು" ಎಂದು ಓಬಲ ತಮ್ಮನು ವಹಿಸಿಕೊಟ್ಟ ಕಾರ್ಯವನ್ನು ನೆರವೇರಿಸಲು ಒಪ್ಪಿದ.

---

## ಹದಿನಾರು

ಅಪ್ಪಾಜಿಯು ಸಂದೇಶವನ್ನು ತೆಗೆದುಕೊಂಡು ಓಬಲ ಹೂವಯ್ಯನ ಗುಡಿಸಲನ್ನು ಅರಸುತ್ತಾ ತೆರಳಿದ. ಹೂವಯ್ಯ ತನ್ನ ಕುಟೀರದಿಂದ ಅನತಿ ದೂರದಲ್ಲಿ ಒಂದು ಮರದ ನೆರಳಿನಲ್ಲಿ ಕುಳಿತು ಅಪ್ಪಾಜಿಯು ಆಗಮನವನ್ನು ನಿರೀಕ್ಷಿಸುತ್ತಿದ್ದ. ಅವನೊಡನೆ ಮಲ್ಲಿಗೆಯಿದ್ದಳು.

"ನೋಡು ತಂಗಿ, ಅಪ್ಪಾಜಿ ಹೊತ್ತು ನೆತ್ತಿಗೇರುವಷ್ಟರಲ್ಲಿ ಬರುವೆನೆಂದು ಹೇಳಿದ್ದ. ಮಧ್ಯಾಹ್ನವಾದರೂ ಅಪ್ಪಾಜಿ ಬಾರದುದನ್ನು ಕಂಡು ಹೂವಯ್ಯ ಹೇಳಿದ. "ಈಗ ನೇಸರು ನೆತ್ತಿಯಿಂದ ಎರಡುಮಾರು ಕೆಳಗಿಳಿದಿದ್ದಾನೆ. ಆದರೂ ಅಪ್ಪಾಜಿಯು ಮೊಗ ಗೋಚರಿಸದು."

"ಅಣ್ಣ, ಅಪ್ಪಾಜಿ ಸಮೀಪದಲ್ಲಿ ಇಲ್ಲದ ಪ್ರತಿಯೊಂದು ನಿಮಿಷ ನಿನಗೆ ಒಂದೊಂದು ದಿನದಂತೆ ತೋರುವುದಲ್ಲವೇ? ನಗುತ್ತಾ ಮಲ್ಲಿಗೆ ಹೇಳಿದಳು. "ಅವನು ಹೆದೆಯೇರಿಸಿದ ಬಿಲ್ಲನ್ನು ಕೈಯಲ್ಲಿ ಹಿಡಿದು ಕಡವೆಯನ್ನೋ ಸಾರಂಗ ವನ್ನೋ ಹಿಂಬಾಲಿಸಿ ಹೋಗಿರಬಹುದು. ಅಡವಿಯಲ್ಲಿ ಓಡಿ ಓಡಿ ದಣಿದು ಮರದ ನೆರಳಿನಲ್ಲಿ ಮಲಗಿ ನಿದ್ರಿಸಿರಬಹುದು. ಕನಸಿನಲ್ಲಿ ತನ್ನ ನೆಚ್ಚಿನ ನೀಲಾಂಬಿಕೆಯೊಡನೆ ಸರಸಸಲ್ಲಾಪ ನಡೆಸುತ್ತಿರಬಹುದು.

"ಮಲ್ಲಿಗೆ, ನಿನಗೆ ಯಾವಾಗಲೂ ಚೇಷ್ಟೆಯೇ ಆಗಿದೆ" ಹೂವಯ್ಯ ಹುಸಿಮುನಿಸನ್ನು ತಾಳಿ ಹುಬ್ಬುಗಳನ್ನು ಗಂಟಿಕ್ಕಿದ. "ನೋಡು, ಅಗೋ, ಆ ಮರದ ಮರೆಯಲ್ಲಿ ಯಾವನೋ ಬರುತ್ತಿರುವನು. ಅವನು ಅಪ್ಪಾಜಿಯೆಂದು ತೋರುವುದು."

"ಅಂತೂ ನಿನ್ನ ಚೆನ್ನಿಗ ನಿನ್ನನ್ನು ಮರೆಯಲಿಲ್ಲ; ತಡಮಾಡಿಯಾದರೂ ಬಂದನಲ್ಲ!

ಹೂವಯ್ಯ ಮರಗಳ ಎಡೆಯಿಂದ ತಾವಿದ್ದೆಡೆಗೆ ಬರುತ್ತಲಿದ್ದ ಆ ವ್ಯಕ್ತಿಯ ಮೊಗದಿಂದ ಕಣ್ಣುಗಳನ್ನು ತೆಗೆಯಲಿಲ್ಲ. ಅವನ ನಿಲವು ಅಪ್ಪಾಜಿ ಯಂತೆಯೇ ಇತ್ತು. ಅವನು ಅಪ್ಪಾಜಿಯಾಗಿದ್ದಾನೆ ಎಂಬ ಭಾವನೆಯಿಂದ ಹೂವಯ್ಯನ ಮೊಗದಾವರೆ ಅರಳಿತು. ಈಗ ಆತ ಸನಿಹಕ್ಕೆ ಬಂದ. ಆತನ ಆಕಾರ ಅಪ್ಪಾಜಿಯನ್ನು ಹೋಲುತ್ತಿದ್ದರೂ ಅವನು ಅಪ್ಪಾಜಿಯಾಗಿರಲಿಲ್ಲ. ಅಪ್ಪಾಜಿಯು ಮುಖಛಾಯೆ ಅವನಲ್ಲಿತ್ತು. ಆದರೆ ಅವನು ಅಪ್ಪಾಜಿಗಿಂತ

ಎತ್ತರನಾಗಿದ್ದ. ಕೃಶವಾದ ಶರೀರವುಳ್ಳವನಾಗಿದ್ದ. ಆತ ತನ್ನ ನೆಚ್ಚಿನ ಅಪ್ಪಾಜಿಯಲ್ಲವೆಂಬುದು ಅರಿವಾಗಲು ಹೂವಯ್ಯನ ಮೊಗದಲ್ಲಿ ಮಿನುಗುತ್ತಿದ್ದ ನಲಿವು ನಿರಾಶೆಯಾಗಿ ಮಾರ್ಪಟ್ಟಿತು.

"ಎಲೈ ತರುಣ,—ಇಲ್ಲೆಲ್ಲೋ ಒಂದು ಕುರುಬರ ಗುಡಿಸಲಿರುವುದಂತೆ." ಆಗಂತುಕ ಹೂವಯ್ಯನನ್ನು ಉದ್ದೇಶಿಸಿ ಮಾತಾಡಿದ. "ನಿಂಬೇಗಿಡಗಳ ಬೇಲಿ ಅದನ್ನು ಬಳಸಿದೆಯಂತೆ. ಆ ಸ್ಥಳವನ್ನು ನನಗೊಮ್ಮೆ ತೋರಿಸಿ ಕೊಡುವೆಯಾ?"

"ನೋಡು, ಇಲ್ಲಿಗೆ ಪಡುವಲಲ್ಲಿ ಆ ಸ್ಥಳವಿದೆ." ಮಲ್ಲಿಗೆ ಆ ಗುಡಿಸಲಿರುವ ಎಡೆಯನ್ನು ವಿವರಿಸತೊಡಗಿದಳು. "ಅಲ್ಲಿ ಒಂದು ಸಣ್ಣ ತೊರೆ ಹರಿದುಬರುತ್ತಿದೆ. ಬೆತ್ತಗಳು ಆ ತೊರೆಯ ಇಕ್ಕಡೆಗಳಲ್ಲಿ ಬೆಳೆದು ತೊರೆಗೆ ಕಮಾನು ಕಟ್ಟಿವೆ. ಅಲ್ಲೇ ಪಕ್ಕದಲ್ಲಿ ನೀನು ಅರಸುವ ಗುಡಿಸಲಿದೆ. ಆದರೆ ಈ ವೇಳೆಯಲ್ಲಿ ನಿನ್ನನ್ನು ಇದಿರುಗೊಳ್ಳಲು ಅಲ್ಲಿ ಜನರಾರೂ ಇಲ್ಲ; ಕುಟೀರ ಮಾತ್ರ ಇರುವುದು.

"ಆತ ಹೇಳಿದ ವಿವರಣೆಯಿಂದ ನೀವು ಯಾರೆಂಬುದನ್ನು ಗುರುತಿಸಬಲ್ಲೆ." ಅಪರಿಚಿತ ಮಾತು ಮುಂದುವರಿಸಿದ; ಅವನು ಹೇಳಿದ ರೀತಿಯಲ್ಲೇ ಉಡಿಗೆತೊಡಿಗೆಗಳು; ಅದೇ ಪ್ರಾಯ; ತರುಣ ಸುಂದರನಾಗಿದ್ದಾನೆ. ಆದರೆ ಅವನ ಮೊಗದಲ್ಲಿ ಹೆಣ್ಣುತನದ ನೆರಳು ಕಂಡುಬರುತ್ತಿದೆ. ಉದ್ದನ್ನ ಮೈ; ಆದರೆ ತರುಣಿ ಗಿಡ್ಡ ಮೈಯವಳು. ಹೌದು ತಾನು ಅರಸುವ ಗುಡಿಸಿಲಿನ ಮಾಲಿಕ ನೀನೇ ಅಲ್ಲವೇ?"

ಎಂದು ಹೇಳಿದ ವ್ಯಕ್ತಿ ಹೂವಯ್ಯನ ಮೋರೆಯನ್ನು ದಿಟ್ಟಿಸಿನೋಡಿದ.

"ಹೌದು,—ನಾವೇನೆ" ಎಂದು ಮಲ್ಲಿಗೆ ನುಡಿದಳು.

"ಅಪ್ಪಾಜಿ ನನ್ನನ್ನು ನಿಮ್ಮೆಡೆಗೆ ಕಳುಹಿದ್ದಾನೆ. ನಾನು ಆತನ ಅಣ್ಣ; ನನ್ನ ಹೆಸರು ಓಬಲನೆಂದು." ಓಬಲ ತಾನು ಬಂದ ಕಾರ್ಯವೇನೆಂದು ಹೂವಯ್ಯನಿಗೆ ವಿವರಿಸಲಾರಂಭಿಸಿದ. "ಅವನು ವಿನೋದಕ್ಕೋಸ್ಕರ ನಿನ್ನನ್ನು ನೀಲಾಂಬಿಕೆಯೆಂದು ಕರೆಯುತ್ತಿರುವನಂತೆ. ಅವನು ರಕ್ತವಿಲೇಪಿತ ವಸ್ತ್ರವನ್ನು ಕಳುಹಿರುವನು. ರಕ್ತಕಲಂಕಿತ ವಸ್ತ್ರ ನಿನ್ನೆಡೆಗೆ ಬರಲು ಕಾರಣನಾದವನು ನಾನೇ ಆಗಿರುವೆನು. ನಾನು ಅಪ್ಪಾಜಿಯಿಂದ ಒಂದು ನುಡಿಯನ್ನು ತಂದಿರುವೆನು. ನೀನೇತಾನೇ ಹೂವಯ್ಯ?"

“ಹೌದು ನೀನು ಬಣ್ಣಿಸುವ ಹೂವಯ್ಯ ನಾನೇ.” ಹೂವಯ್ಯನ ತುಟಿಗಳಿಂದ ಆತುರದ ಮಾತುಗಳು ಹೊಮ್ಮಿದುವು.

“ಅವನೇಕೆ ರಕ್ತ ವಿಲೇಪಿತ ವಸ್ತ್ರವನ್ನು ಕಳುಹಿದ? ಅವನೇಕೆ ಬರಲಿಲ್ಲ? ಅವನಿಗೇನಾಯಿತು?”

“ನೀನು ಹೀಗೆ ಹತ್ತೆಂಟು ಪ್ರಶ್ನೆಗಳನ್ನು ನನ್ನ ಮೇಲೆಸೆದರೆ ನಾನು ಹೇಗೆ ಉತ್ತರ ಕೊಡಲಿ.” ಓಬಲ ಮಾರ್ನುಡಿದ. ನಾನು “ಅಪ್ಪಾಜಿಯ ಅಣ್ಣ ಓಬಲ—ಅವನನ್ನು ಪರಿಪರಿಯಿಂದ ಪೀಡಿಸಿದ ಮತ್ತು ಅವನ ಪ್ರಾಣಾಪಹಾರವನ್ನು ಗೈಯಲೆತ್ನಿಸಿದ ನೀಚ ಸೋದರನು ನಾನು.”

ಓಬಲ ತಾನು ಅಪ್ಪಾಜಿಯನ್ನು ವಧಿಸಲೆಂದು ಪಣತೊಟ್ಟು ಕಾಡಿಗೆ ಬಂದುದನ್ನು ಅವರಿಗೆ ಅರುಹಿದ. ಅಪ್ಪಾಜಿ ಹುಲಿಯ ದವಡೆಯಿಂದ ತನ್ನ ಪ್ರಾಣವನ್ನು ಹೇಗೆ ರಕ್ಷಿಸಿದನೆಂಬುದನ್ನೂ ವಿಸ್ತಾರವಾಗಿ ಬಣ್ಣಿಸಿದ. “ಹುಲಿಯೊಡನೆ ಕಾದಿ ಬಳಲಿದ ಅಪ್ಪಾಜಿ ನೀಲಾಂಬಿಕೆಯ ನಾಮೋಚ್ಚರಣೆ ಮಾಡುತ್ತ ಮೂರ್ಛೆಹೋದ.” ಓಬಲ ತಾನು—ಬಣ್ಣಿಸುತ್ತಿರುವ ವೃತ್ತಾಂತವನ್ನು ಮುಗಿಸುತ್ತಾ ಹೇಳಿದ. ಅವನು ಕೊನೆಗೆ ಪ್ರಜ್ಞೆಯನ್ನು ಹೊಂದಿದ ಮೇಲೆ ರಕ್ತದಲ್ಲಿ ನಾಂದಿದ ಈ ವಸ್ತ್ರವನ್ನು ನನ್ನ ಕೈಗಿತ್ತು, ‘ನಾನು ಮಧ್ಯಾಹ್ನ ಬರುವೆನೆಂದು ಹೇಳಿದ್ದೆ. ಆದರೆ ನನ್ನ ತೋಳುಗಳಿಗೆ ಗಾಯಗಳಾಗಿ ನೆತ್ತರು ಬಸಿದುದರಿಂದ ನಡೆಯಲಾರೆ. ವಾಗ್ದಾನ ಮೀರಿದ ನನ್ನ ಅಪರಾಧವನ್ನು ಮನ್ನಿಸಬೇಕು. ಇದಕ್ಕೆ ರಕ್ತವಿಲೇಪಿತ ವಸ್ತ್ರವೇ ಸಾಕ್ಷಿ!’ ಎಂಬ ಸಂದೇಶ ಕಳುಹಿದ್ದಾನೆ. ಎಂದು ಹೇಳುತ್ತಾ ಓಬಲ ತಾನು ತಂದಿದ್ದ ರಕ್ತ ವಿಲೇಪಿತ ವಸ್ತ್ರವನ್ನು ಹೂವಯ್ಯನಿಗೆ ಕೈಚಾಚಿ ಕೊಟ್ಟ.

ಅಪ್ಪಾಜಿಗೆ ಹುಲಿಯೊಡನೆ ಕಾದಿದುದರಿಂದ ಗಾಯವಾದ ಸುದ್ದಿಯನ್ನು ಕೇಳಲು ಹೂವಯ್ಯನ ಮೊಗ ಬಿಳುಪೇರಿತು. ಓಬಲ ಚಾಚಿದ ರಕ್ತವಿಲೇಪಿತ ವಸ್ತ್ರವನ್ನು ನೋಡಿದೊಡನೆ ಅವನು ಸ್ಮೃತಿಗೆಟ್ಟು ನೆಲದ ಮೇಲೆ ಬಿದ್ದ. ಹೂವಯ್ಯ ಅಕಸ್ಮಿಕವಾಗಿ ಪ್ರಜ್ಞಾಶೂನ್ಯನಾದುದನ್ನು ಕಂಡು ಓಬಲನಿಗೆ ವಿಸ್ಮಯವೆನಿಸಿತು. ಅವನು “ರಕ್ತ ಬಸಿವುದನ್ನು ಕಂಡಾಗ ಅನೇಕರು ಪ್ರಜ್ಞೆ ತಪ್ಪುವರೆಂದು ನಾನು ಕೇಳಿದ್ದೇನೆ ಆದರೆ ನೆತ್ತರಲ್ಲಿ ನೆನೆದ ಅರಿವೆಯನ್ನು ನೋಡಿದ ಮಾತ್ರದಿಂದ ಜನರು ಮೂರ್ಛಿತರಾಗುವರೆಂಬುದನ್ನು ಎಲ್ಲಿಯೂ ಕೇಳಿಲ್ಲ!” ಎಂದು ಉದ್ಗಾರವೆತ್ತಿದ.

“ಅಣ್ಣಾ, ಅಣ್ಣಾ, ನಿನಗೇನಾಯಿತು? ಎಚ್ಚರಗೊಳ್ಳು” ಎಂದು ನುಡಿಯುತ್ತಾ ಮಲ್ಲಿಗೆ ಸೀರೆಯ ಸೆರಗಿನಿಂದ ಹೂವಯ್ಯನಿಗೆ ಗಾಳಿಹಾಕಿದಳು.

ಕೆಲವು ನಿಮಿಷಗಳಲ್ಲಿ ಹೂವಯ್ಯನಿಗೆ ಕೊಂಚ ಸ್ಮೃತಿಬಂದಿತು. ಅವನು, “ಮಲ್ಲಿಗೆ, ಏಕೋ ಆಯಾಸವಾಗುತ್ತಿದೆ. ಗುಡಿಸಿಲಿಗೆ ಹೋಗೋಣ.” ಎಂದು ಹೇಳಿದ.

“ಬಾ, ನಿನ್ನನ್ನು ಕರೆದೊಯ್ಯುವೆವು.” ಎಂದು ಹೇಳುತ್ತಾ ಮಲ್ಲಿಗೆ ಓಬಲನ ಮೊಗದತ್ತ ತನ್ನ ದೃಷ್ಟಿಯನ್ನು ಹೊರಳಿಸಿದಳು. “ನೀನು ನನಗೆ ಸ್ವಲ್ಪ ನೆರವಾಗುವೆಯಾ? ಅಣ್ಣನ ತೋಳನ್ನು ಸ್ವಲ್ಪ ಹಿಡಿದುಕೊಳ್ಳಬಲ್ಲೆಯಾ?”

“ಸಂತೋಷಪೂರ್ವಕವಾಗಿ, ಅನ್ಯರಿಗೆ ನೆರವಾಗಲು ದೊರೆತ ಅವಕಾಶ ನನಗೊದಗಿದ ಭಾಗ್ಯವೆಂದು ಎಣಿಸುತ್ತೇನೆ.” ಓಬಲ ಮಲ್ಲಿಗೆಯ ಮೊಗದ ಮೇಲೆ ನೆಟ್ಟ ದೃಷ್ಟಿಯನ್ನು ಚಲಿಸದೆ ನುಡಿದ.

ಅವನು ಹೂವಯ್ಯನ ತೋಳನ್ನು ಹಿಡಿದೆತ್ತಿದ. ಅವನ ಕೈಯನ್ನು ಹಿಡಿದು ನಡೆಸುತ್ತಾ, “ಗೆಳೆಯ, ಪುರುಷರಿಗೆ ಇರಬೇಕಾದ ಗಂಡೆದೆ ನಿನಗಿಲ್ಲ.” ಎಂದು ಹೇಳಿದ.

“ನನ್ನ ಹೃದಯ ಹೆಣ್ಣಿನ ಅಳ್ಳೆದೆಯಂತಿದೆ ಎಂದು ನಾನು ಒಪ್ಪಿಕೊಳ್ಳಬೇಕಾಗುವುದು” ತಗ್ಗಿದ ದನಿಯಲ್ಲಿ ಹೂವಯ್ಯ ಮಾರ್ನುಡಿದ. “ನಾನು ಸ್ಮೃತಿ ತಪ್ಪಿದವನಂತೆ ನಟಿಸಿದೆ ಅಷ್ಟೆ. ಸ್ಮೃತಿತಪ್ಪಿದವನ ಇರವನ್ನು ನಾನು ಎಷ್ಟು ಸೊಗಸಾಗಿ ಅಭಿನಯಿಸಿದೆನೆಂಬುದನ್ನು ನಿನ್ನ ತಮ್ಮನಿಗೆ ತಿಳಿಸು.”

“ಆದರೆ, ಇದು ಕೃತಕ ಮೂರ್ಛಾಭಿನಯವಲ್ಲ.” ಓಬಲ ಹೂವಯ್ಯನ ಮಾತನ್ನು ಅಲ್ಲಗಳೆಯುತ್ತಾ ಮರುನುಡಿದ. “ನೀನು ಅಭಿನಯಿಸಿದ ಮೂರ್ಛೆ ನೈಜವಾದುದೆಂದು ನಿನ್ನ ಮೊಗದ ಬಣ್ಣವೇ ಸಾರುತ್ತಿದೆ.”

“ಇಲ್ಲ, ಅದು ಕೇವಲ ನಟನೆ. ನಿನ್ನ ಸೋದರನ ಮುಂದೆ ನಾನು ನೀಲಾಂಬಿಕೆಯ ಭೂಮಿಕೆಯನ್ನು ವಹಿಸಿ ನಟಿಸುತ್ತಿದ್ದೆ. ಆ ಅಭ್ಯಾಸಬಲದಿಂದ ಈಗ ಮೂರ್ಛೆಗೊಂಡವನಂತೆ ಅಭಿನಯಿಸಿದೆ ಅಷ್ಟೆ.”

“ಹಾಗಾದರೆ ಈಗ ಎದೆಯಲ್ಲಿ ಧೈರ್ಯ ತಾಳಿ, ಇನ್ನೊಮ್ಮೆ ಗಂಡಸಾಗಲು ಪ್ರಯತ್ನಿಸು!”

ಅವರು ಮಾತಾಡುತ್ತಾ ಹೂವಯ್ಯನನ್ನು ಕುಟೀರಕ್ಕೆ ಕರದೊಯ್ದರು. ಓಬಲ ಮಲ್ಲಿಗೆಯರು ಪರಸ್ಪರ ಹೆಚ್ಚು ಮಾತನಾಡಲಿಲ್ಲ. ಆದರೆ ಈರ್ವರ ಕಣ್ಣುಗಳು ಪರಸ್ಪರ ಕದ್ದು ನೋಡುತ್ತಿದ್ದವು. ಓಬಲನ ಕಣ್ಣುಗಳ ಬೆಳಕು ಆಕೆಯ ಮೊಗದ ಮೇಲೆ ಬಿದ್ದಾಗ, ಮಲ್ಲಿಗೆಯ ಮೋರೆ ಗುಲಾಬಿಯ ಮೊಗ್ಗಿನಂತೆ ಕೆಂಪಡರುತ್ತಿದ್ದಿತು. ಅವಳು ತಲೆ ಬಾಗಿ ನೆಲವನ್ನು ನೋಡುತ್ತಿದ್ದಳು. ಅವಳ ಮೊಗದ ಸೌಂದರ್ಯ ಓಬಲನ ಕಣ್ಣುಗಳಿಗೆ ನಲವನ್ನೀಯುತ್ತಿದ್ದಿತು; ಹೃದಯಕ್ಕೆ ತಂಪನ್ನು ಒದಗಿಸುತ್ತಿದ್ದಿತು.

---

## ಹದಿನೇಳು

ಮಲ್ಲಿಗೆಯ ರೂಪ ಗುಣಗಳು ಓಬಲನ ಹೃದಯುವನ್ನು ಸೂರೆಗೊಂಡುವು. ಸರ್ವ ಸದ್ಗುಣಗಳ ಭಂಡಾರದಂತೆ ಅವಳು ಅವನ ಕಣ್ಣುಗಳಿಗೆ ಗೋಚರಿಸಿದಳು. ಕರುಣೆಯ ಬೆಳದಿಂಗಳನ್ನು ಹೊರಚೆಲ್ಲುವ ಆಕೆಯ ಕಣ್ಣುಗಳು ಅವನ ಹೃದಯುವನ್ನು ಸೆಳೆದುವು. ಬೆಂದ ತನ್ನ ಎದೆಗೆ ಒಲವಿನ ಸವಿನೀರೆರೆದು, ಬಾಳುವೆಯನ್ನು ಕೊನರಿಸಬಲ್ಲ ಶಕ್ತಿ ಆಕೆಗಿದೆ ಎಂದು ಅವನ ಅಂತರಂಗ ಹೇಳಿತು. ಆಕೆಯಿಲ್ಲದ ಬಾಳು ಹಾಳು ಎಂದು ಅವನಿಗನಿಸಿತು. ಅವಳ ಕರವಿಡಿದು ತನ್ನ ಹೃದಯ ಮಂದಿರದ ಅಧಿದೇವತೆಯೆಂದು ಪ್ರತಿಷ್ಠಾಪನೆ ಮಾಡಿ ಆರಾಧಿಸುವುದರಲ್ಲಿ, ತನ್ನ ಸುಖಸಂತೋಷಗಳು ಅಡಕವಾಗಿವೆಯೆಂಬುದು ಅವನಿಗೆ ಅರಿವಾಯಿತು. ಮಲ್ಲಿಗೆಯನ್ನು ಮದುವೆಯಾಗಿ, ತಾನೊಂದು ಗುಡಿಸಲನ್ನು ಕಾಡಿನಂಚಿನಲ್ಲಿ ಕಟ್ಟಿಕೊಂಡು ಕುರಿಗಾಹಿಯ ಜೀವನವನ್ನು ಕೈಗೊಳ್ಳಲು ಅವನು ಬಯಸಿದ. ಈ ಬಗೆಯ ನಿರಾಡಂಬರದ ಅಕೃತ್ರಿಮ ಜೀವನ ರಾಜಾಸ್ಥಾನದ ಸುಖಭೋಗಗಳಿಗಿಂತಲೂ ಮಿಗಿಲಾದುದು ಎಂದು ಅವನಿಗನಿಸಿತು.

ಗುಡಿಸಲನ್ನು ಸೇರಿದ ಅನಂತರ ಓಬಲ ತನ್ನ ಆತ್ಮಕಥೆಯನ್ನು ಹೂವಯ್ಯ ಮಲ್ಲಿಗೆಯರಿಗೆ ವಿವರಿಸಿ ಹೇಳಿದ. ಮಲ್ಲಿಗೆ ಅವನ ಜೀವನದ ಕತೆಯನ್ನು ಕಿವಿಗೊಟ್ಟು ಕೇಳಿದಳು. ಅವನ ಮಾತುಗಾರಿಕೆಯಲ್ಲಿ ಹೊರ

ಸೂಸುತ್ತಿರುವ ನಿಷ್ಕಲಂಕತೆ, ಅವನ ಹೃದಯದಲ್ಲಿ ಉದಿಸಿದ ಪಶ್ಚಾತ್ತಾಪ ಇವುಗಳು ಮಲ್ಲಿಗೆಯ ಚಿತ್ತವನ್ನು ಸೆಳೆದುವು. ಪಶ್ಚಾತ್ತಾಪಾಗ್ನಿಯಲ್ಲಿ ಬೆಂದು ಶುದ್ಧವಾದ ಆತನ ಹೃದಯ ಪುಟವಿಕ್ಕಿದ ಬಂಗಾರದಂತೆ ಶುಭ್ರವಾಗಿ ಕಾಂತಿ ಯುಕ್ತವಾಗಿ ಅವಳಿಗೆ ತೋರಿತು. ಓಬಲನ ಕತೆಯನ್ನು ಕೇಳಿದಾಗ "ತನ್ನ ತಪ್ಪುಗಳನ್ನು ಇತರರ ದೃಷ್ಟಿಗಳಿಂದ ಮರೆಮಾಜದೆ ಒಪ್ಪಿಕೊಳ್ಳುವುದು ಬಲ್ಲಿದರ ಲಕ್ಷಣ" ಎಂಬ ಪ್ರಾಜ್ಞರ ವಚನ ಅವಳ ಸ್ಮೃತಿಪಥದಲ್ಲಿ ಸುಳಿಯಿತು. ಸೋದರನಿಗೆ ತಾನು ಮಾಡಿದ ಅನ್ಯಾಯಗಳನ್ನು ಬಿಚ್ಚು ಮನಸ್ಸಿನಿಂದ ಒಪ್ಪಿ ಕೊಂಡ ಓಬಲ ಅವಳ ಕಣ್ಣುಗಳಿಗೆ ಒಬ್ಬ ಆದರ್ಶ ವ್ಯಕ್ತಿಯಾಗಿ ತೋರಿದ. ಇಂತಹ ಪುರುಷನ ಕರವಿಡಿದು ಬಾಳುವುದು ಒಂದು ಮಹಾಭಾಗ್ಯವೆಂದು ಅವಳು ಎಣಿಸಿದಳು. ಅವನು ತನ್ನ ಬೆಂಗಾವಲಿಗಿದ್ದರೆ ಬೆಂಕಿಯ ಕೆಂಡಗಳು ನಿಗಿನಿಗಿಸುವ ಭೀಕರ ಪಥದಲ್ಲಿಯೂ ಸಧೈರ್ಯದಿಂದ ಅಡಿಗಳನ್ನಿರಿಸಬಲ್ಲೆನೆಂದು ಅವಳ ಅಂತರಾತ್ಮ ನುಡಿಯಿತು.

ಹೂವಯ್ಯ ಮಲ್ಲಿಗೆಯ ದೃಷ್ಟಿಯಲ್ಲಿ ತೋರಿಬರುವ ಚಂಚಲತೆ, ಮೊಗದಲ್ಲಿ ಕಳೆಯಾಡುತ್ತಿರುವ ಗುಲಾಬಿಯ ಬಣ್ಣ, ಎದೆಯಿಂದ ಆಗಾಗ ಹೊರಹೊಮ್ಮುತ್ತಿರುವ ಪೇರುಸಿರುಗಳನ್ನು ನೋಡಿದ. ಆಕೆಯಲ್ಲಿ ತೋರಿ ಬರುವ ಭಾವಭೇದಕ್ಕೆ ಕಾರಣವೇನೆಂಬುದನ್ನು ಅವನ ಬುದ್ಧಿ ಅರಸಿತು. ದರ್ಶನಮಾತ್ರದಿಂದ ಓಬಲನಲ್ಲಿ ಮಲ್ಲಿಗೆಗೆ ಅನುರಾಗ ಹುಟ್ಟಿದುದನ್ನು ಕಂಡು ಅವನಿಗೆ ಸೋಜಿಗವೆನಿಸಿತು. ಅವನು ತನ್ನಲ್ಲಿಯೇ ಪ್ರೇಮದ ಮಹಿಮೆ ಅಗಾಧವಾದುದು ಎಂದು ಹೇಳಿಕೊಂಡ. ಪಶ್ಚಾತ್ತಾಪಾಗ್ನಿಯಲ್ಲಿ ಸುಟ್ಟು ಕಿಲುಬನ್ನು ಕಳಕೊಂಡ ಓಬಲ ಎಲ್ಲ ವಿಧದಲ್ಲಿಯೂ ಮಲ್ಲಿಗೆಗೆ ಅನುರೂಪನಾದ ವರನೆಂದು ಹೂವಯ್ಯ ಗ್ರಹಿಸಿದ. ಅವರೀರ್ವರಲ್ಲಿ ಒಲವು ಕುಡಿಬಿಡಲಿ; ಕುಡಿಬಿಟ್ಟು ಬಳ್ಳಿಯಾಗಿ ಈರ್ವರ ಬಾಳುವೆಗಳನ್ನು ಒಂದಾಗಿ ಬಿಗಿಯಲಿ ಎಂದು ಹಾರೈಸಿದ.

"ಮಲ್ಲಿಗೆ, ನಿನ್ನೊಡನೆ ಕೆಲ ಮಾತುಗಳನ್ನಾಡಬೇಕಾಗಿದೆ." ಒಂಟಿಯಾದ ಮಲ್ಲಿಗೆಯನ್ನು ಓಬಲ ಮಾತಾಡಿಸಿದ.

"ನನ್ನ ನಿನ್ನ ಪರಿಚಯ ಹೆಚ್ಚಾಗಿ ಬೆಳೆದಿಲ್ಲ." ಮಲ್ಲಿಗೆ ಬೇರೊಂದು ಕಡೆ ಕಣ್ಣು ತಿರುಗಿಸಿದಳು.

"ಸ್ನೇಹದ ದೃಢತೆಯನ್ನು ಕಾಲಮಾನದಿಂದ ಅಳೆಯಲು ಸಾಧ್ಯವಿಲ್ಲ."

ಓಬಲ ಹೇಳಿದ. "ಒಂದು ಕ್ಷಣದ ಪರಿಚಯದಿಂದ ಎದೆಯಲ್ಲಿ ಅಂಕುರಿಸಿದ ಸ್ನೇಹ, ಜೀವಮಾನದ ಮೈತ್ರಿಗಿಂತ ದೃಢವೂ, ಉಚ್ಚತಮವೂ ಆಗಿ ಪರಿಣಮಿಸ ಬಲ್ಲುದು. ನಿನ್ನನ್ನು ನೋಡಿದಾಗ, ನೀನು ನನಗೆ ಹೊಸಬಳೆಂದೆನಿಸುವುದಿಲ್ಲ. ಎಷ್ಟೋ ವರ್ಷಗಳ ಸ್ನೇಹ ಸಂಬಂಧ ನಮ್ಮಿರ್ವರಲ್ಲಿ ನೆಲಸಿರುವಂತೆ ನನಗೆ ಭಾಸವಾಗುತ್ತದೆ. ನಾವು ಹಿಂದಿನ ಜನ್ಮದಲ್ಲಿ ಗೆಳೆಯರಾಗಿದ್ದೆವೆಂದು ತೋರುವುದು. ಏಕೆ ನೀನು ಪ್ರತಿ ಮಾತಾಡುವುದಿಲ್ಲ?"

"ನೀನು ಒಂದೇಸವನೆ ಮಾತುಗಳ ಸರಳಂಬುಗಳನ್ನು ನನ್ನ ಮೇಲೆ ಮಳೆಗರೆಯುತ್ತಿದ್ದರೆ, ನಾನು ಹೇಗೆ ಬಾಯಿಬಿಡಲಿ?"

"ಈಗ ಮಾತಾಡು. ನಾನು ಬಾಯಿಗೆ ಬೀಗ ಹಾಕಿಕೊಳ್ಳುವೆನು."

"ನಾನು ಹೊಸಬಳಂತೆ ತೋರುವುದಿಲ್ಲ ಅಂದಿಯಲ್ಲ. ಅದು ಹೇಗೆ?"

"ಹೇಗೆಂದು ಹೇಳಲಿ? ನನ್ನ ಆತ್ಮ "ನೀನು ಹೊಸಬಳಲ್ಲ, ಜನ್ಮಾಂತರ ಗಳಿಂದ ಪರಿಚಯವುಳ್ಳವಳು." ಎಂದು ನುಡಿಯುತ್ತಿದೆ. ಆದರೆ ನನ್ನ ನುಡಿಗೆ ನೀನು ಕಿವಿಗುಡುವಿಯೋ, ಇಲ್ಲವೋ ಎಂದು ಸಂದೇಹ."

"ಈ ತನಕ ನಿನ್ನ ಮಾತುಗಳಿಗೆ ನಾನು ಕಿವಿಗುಡಲಿಲ್ಲವೇ? ಈಗ ಸಂದೇಹಕ್ಕೆ ಎಲ್ಲಿ ಅವಕಾಶ ಬಂತು?"

"ಮಲ್ಲಿಗೆ, ನೀನು ನನ್ನ ನುಡಿಯನ್ನು ಅಲ್ಲಗಳೆಯುವಿಯೆಂದು ನನ್ನ ಅಂಜಿಕೆ."

"ಅದು ನೀನು ಹೇಳುವ ವಿಷಯವನ್ನು ಹೊಂದಿಕೊಂಡಿದೆ."

"ಹೇಳಿ ಬಿಡಲೇ?"

"ಹೂಂ—ಆಗಲೇ ಹೇಳಿದೆನಲ್ಲ."

"ನೀನು ನನ್ನ ವಿಷಯದಲ್ಲಿ ತಪ್ಪು ಗ್ರಹಿಸಲಾಗದು."

"ಹೂಂ,—ಹೇಳು. ಹೀಗೆ ಪೊದೆಯನ್ನು ಕೋಲಿನಿಂದ ಸುಮ್ಮನೆ ಬಡಿಯುವುದೇಕೆ?"

"ಆಗಲಿ. ಹೇಳಿಬಿಡುತ್ತೇನೆ. ನಾನು . . . ನಾನು."

"ಏಕೆ ನುಡಿಯನ್ನು ಅರ್ಧದಲ್ಲಿ ನಿಲ್ಲಿಸಿಬಿಟ್ಟೆ?"

"ಏಕೋ, ನನ್ನ ಎದೆ ಅಳುಕುತ್ತಿದೆ."

"ನಾನೇನು ಹುಲಿಯೇ?"

"ಅಲ್ಲ. ನೋಡು, ಹೇಳಿಯೇ ಬಿಡುವೆನು." ಓಬಲ ತಲೆತಗ್ಗಿಸಿ

ಮಾತು ಮುಂದುವರಿಸಿದ. "ನಾನು ನಿನ್ನನ್ನು ಪ್ರೀತಿಸುವೆನು. ನೀನಿಲ್ಲದ ಬಾಳು ನನಗೆ ಮಸಣದಂತಾಗುವುದು. ನಿನ್ನ ರೂಪಕ್ಕೆ ಗುಣಗಳಿಗೆ ನಾನು ಮಾರುಹೋಗಿದ್ದೇನೆ. ನೀನೆನ್ನ ಮಡದಿಯಾಗು. ನನ್ನ ಬಾಳುವೆಯ ಬೆಳಕಾಗು. ನೀನಿದ್ದರೆ ಕಾಡೇ ನಾಡು. ಬಡತನವೇ ಸಿರಿತನ. ನಿನ್ನನ್ನು ಹೃದಯದಲ್ಲಿರಿಸಿ ಆರಾಧಿಸುವೆನು."

ಮಲ್ಲಿಗೆಯು ತುಟಿಗಳಿಂದ ಪ್ರತಿವಚನಗಳು ಹೊರಡಲಿಲ್ಲ. ಅವಳ ಕಣ್ಣುಗಳು ನೆಲವನ್ನು ನೋಡಿದುವು. ಮೊಗದ ಮೇಲೆ ಬೆವರು ಹನಿಗಳು ಮೂಡಿದುವು.

"ಮಲ್ಲಿಗೆ, ಏಕೆ ತುಟಿ ತೆರೆಯದಿರುವೆ." ಓಬಲ ತನ್ನ ಪ್ರೇಯಸಿ ಮಾರ್ನುಡಿಯದುದನ್ನು ಕಂಡು ಹೇಳಿದ. "ನಿನಗೆ ನನ್ನ ಮೇಲೆ ಕೋಪವೇ?"

"ನಾನೇಕೆ ಕೋಪ ತಾಳಲಿ?"

"ನೀನು ಇಷ್ಟಪಡದ ಮಾತುಗಳನ್ನು ಆಡಿದೆನೆಂದು; ಕೇವಲ ಕೆಲವು ಗಳಿಗೆಗಳ ಪರಿಚಯದ ಆಧಾರದಿಂದ ಆಡಬಾರದ ನುಡಿಗಳನ್ನು ಆಡಿದೆನೆಂದು."

"ನಿನ್ನ ಮನಸ್ಸಿನಲ್ಲಿದ್ದ ಅಭಿಪ್ರಾಯವನ್ನು ನೀನು ಹೇಳಿದೆ. ನಾನು ಕೋಪವನ್ನೇಕೆ ತಾಳಬೇಕು?"

"ನನ್ನ ಪ್ರಾರ್ಥನೆಗೆ ದೇವಿಯೊಲಿವಳೆ?"

"ಚಂದ್ರೋದಯವನ್ನು ಕಂಡು ಚಕೋರಿ ಹಿಗ್ಗದಿರುವುದೇ"

ಮಲ್ಲಿಗೆ ತನಗೆ ಪ್ರೇಮಭಿಕ್ಷೆಯನ್ನು ಒಲಿದಿತ್ತಳೆಂಬುದು ಓಬಲನಿಗೆ ಅರಿವಾಯಿತು. ಅವನ ಮೊಗದಲ್ಲಿ ಹರುಷದ ಕದಿರುಗಳು ಕುಣಿದಾಡಿದುವು.

"ಮಲ್ಲಿಗೆ, ನಾನಿಂದು ಕೃತಾರ್ಥನಾದೆ." ಓಬಲ ಮಲ್ಲಿಗೆಯ ಕೈಹಿಡಿದು ಹೇಳಿದ. "ಬರಿದಾದ ನನ್ನ ಬಾಳುವೆಯನ್ನು ಬೆಳಗಿಸುವ ನಂದಾದೀಪ ನೀನು.

"ಅಕ್ಕ, ಅಲ್ಲ, ಅಣ್ಣನನ್ನು ಕೇಳಬೇಕು." ಎಂದು ಮಲ್ಲಿಗೆ ಮೆದುದನಿಯಲ್ಲಿ ಮಾರ್ನುಡಿದಳು.

"ಕೇಳು,—ನಿನ್ನ ಅಣ್ಣ ನಿನ್ನನ್ನು ತುಂಬಾ ಪ್ರೀತಿಸುತ್ತಾನೆ. ಅವನು ಒಪ್ಪದಿರಲಾರ."

ಓಬಲ ತನ್ನ ತಮ್ಮನಿದ್ದೆಡೆಗೆ ತೆರಳಿದ. ಅನಂತರ ಮಲ್ಲಿಗೆ ತನ್ನ ಅಣ್ಣನಿಗೆ ಓಬಲನ ಪ್ರೇಮಯಾಚನೆಯ ವೃತ್ತಾಂತವನ್ನು ಅರುಹಿದಳು.

"ಮಲ್ಲಿಗೆ, ಓಬಲನ ನುಡಿಗಳಿಂದ ಅವನೀಗ ಪರಿಶುದ್ಧನಾಗಿದ್ದಾನೆಂಬುದು

ವಿದಿತವಾಗುತ್ತದೆ." ಹೂವಯ್ಯ ತಂಗಿಯ ಬೆನ್ನನ್ನು ನೇವರಿಸುತ್ತಾ ಹೇಳಿದ. ಅವನಲ್ಲಿ ನೀನು ಮನವಿರಿಸಿದುದು ಸಕ್ಕರೆ ಹಾಲಿನಲ್ಲಿ ಬೆರೆತಂತಾಯಿತು. ನಾವು ಎಳವೆಯಿಂದ ಒಂದಾಗಿ ಅಕ್ಕತಂಗಿಯರಂತೆ ಬಳೆದವರು. ಮುಂದೆ ನಿನ್ನನ್ನು ಅಗಲಿ—ನಾನೆಲ್ಲಿ ಜೀವಿಸಬೇಕಾಗುವುದೋ ಎಂಬ ವ್ಯಥೆ ನನ್ನನು ಕಾಡುತ್ತಿದ್ದಿತು. ಆದರೆ ಈಗ ಆ ಚಿಂತೆ ಪರಿಹಾರವಾಯಿತು. ನವಿಬ್ಬರ್ವರ ಅಗಲಿಕೆ ದೈವಕ್ಕೂ ಸಹ ಮೆಚ್ಚಲಿಲ್ಲ."

ಕೃತಜ್ಞತೆ ವಿಶ್ವಾಸಗಳು ತುಂಬಿದ ಕಣ್ಣುಗಳಿಂದ ಮಲ್ಲಿಗೆ ಅಣ್ಣನನ್ನು ನಿಟ್ಟಿಸಿದಳು. ಅವಳು, "ಅಣ್ಣಾ, ರಾಜ್ಯಭ್ರಷ್ಟ ದೊರೆಯನ್ನು ಸೇರಲೆಂದು ನಾವು ಕಾಡಿಗೆ ಬಂದೆವು. ಇನ್ನೂ ನಾವು ಅವನನ್ನು ನೋಡಲಿಲ್ಲ." ಎಂದು ಹೇಳಿದಳು.

"ಮಲ್ಲಿಗೆ, ಇನ್ನು ಒಂದೆರಡು ದಿನಗಳಲ್ಲಿಯೇ ನಾವು ಅವನನ್ನು ಕಾಣುವೆವು." ಹೂವಯ್ಯ ನುಡಿದ. "ಈಗ ಪದಚ್ಯುತ ದೊರೆಯನ್ನು ನಾವು ಕಾಣಲೇಬೇಕಾಗಿದೆ. ಒಳ್ಳೆ ಮಂಗಳ ಮುಹೂರ್ತದಲ್ಲಿಯೇ ನಾವು ಅವನ ದರ್ಶನಕ್ಕೆ ಹೋಗುವೆವು."

"ಅಂದರೆ?—ನಿನ್ನ ನುಡಿ ನನಗೆ ಅರ್ಥವಾಗುವುದಿಲ್ಲ."

"ಆಗ ಅರ್ಥವಾಗುವುದು ಮಲ್ಲಿಗೆ." ಹೂವಯ್ಯ ನಗುತ್ತಾ ನುಡಿದ. "ನೋಡು, ನಾಡದು ನಿನ್ನ ವಿವಾಹ ಜರಗಲಿರುವುದು. ಪದಚ್ಯುತ ದೊರೆಯೇ ನಿನ್ನನ್ನು ಓಬಲನಿಗೆ ಧಾರೆಯೆರೆದು ಕೊಡುವನು."

"ಥೂ! ಹೋಗಕ್ಕ." ಎಂದು ಮಲ್ಲಿಗೆ ಮೊಗದಿರುಹಿದಳು.

"ಎಲ್ಲಿಗೆ ಹೋಗಲಿ ಮಲ್ಲಿಗೆ." ಹೂವಯ್ಯ ನಗುತ್ತಾ ಹೇಳಿದ. "ನಾನು ನಿನ್ನಿಂದ ದೂರಹೋಗಲು ನಿಶ್ಚಯಿಸಿದರೂ, ನೀನು ನನ್ನ ಬೆನ್ನಹಿಂದೆ ಬಂದೇ ತೀರುವೆನೆಂದು ಪಣ ತೊಟ್ಟಿದ್ದೀಯೆ!"

---

## ಹದಿನೆಂಟು

ಓಬಲ ಹೂವಯ್ಯನ ಸಂದೇಶದೊಡನೆ ಸೋದರನ ನಿವಾಸಸ್ಥಾನಕ್ಕೆ ಮರಳಿದ. ಅವನು ಹೂವಯ್ಯ ಮೂರ್ಛೆ ಹೊಂದಿದ ಬಗೆಯನ್ನು ವಿವರಿಸಿದ; ಮತ್ತು ಆತನೊಡನೆ ಜರಗಿಸಿದ ಮಾತುಕತೆಗಳನ್ನು ಅರುಹಿದ. ಕೊನೆಗೆ ತಮ್ಮನಿಗೆ ತನ್ನ ಪ್ರಣಯದ ಕತೆಯನ್ನು ನಿರೂಪಿಸಿದ. ಅಣ್ಣನ ಪ್ರೇಮದ ಕತೆಯನ್ನು ತಿಳಿದು ಅಪ್ಪಾಜಿಗೆ ಸೋಜಿಗವಾಯಿತು. ಕ್ಷಣಕಾಲದ ಒಡನಾಟ, ಅಪರಿಚಿತ ತರುಣ ತರುಣಿಯರನ್ನು ಪ್ರೇಮಪಾಶದಲ್ಲಿ ಬಿಗಿಯಬಲ್ಲುದೇ ಎಂದು ಆಲೋಚಿಸಿ ಅವನು ಬೆರಗಾದ.

"ಅಣ್ಣಾ, ನೀನು ಹೇಳಿದ ಸಂಗತಿ ಅತ್ಯಂತ ವಿಸ್ಮಯಕಾರಿಯಾಗಿದೆ." ಅಪ್ಪಾಜಿ ನುಡಿದ. "ಒಂದು ಗಳಿಗೆಯ ಪರಿಚಯ ನಿನ್ನನ್ನು ಪ್ರೇಮದ ಬಲೆ ಯಲ್ಲಿ ಕೆಡುಹಿತ್ತೇ?" ನಿನ್ನ ಒಲವಿನ ಬಿನ್ನಹವನ್ನು ಆಕೆ ಸ್ವೀಕರಿಸಿದಳೇ? ಇದು ಆಶ್ಚರ್ಯ. ಕತೆಗಳಲ್ಲಿಯೂ ಸಹ ನಾನು ಇಂತಹ ಸಂಗತಿಗಳನ್ನು ಕೇಳಿಲ್ಲ."

"ತಮ್ಮಾ, ಬೇಕಾದರೆ ನೀನು ಅದನ್ನು ಮೋಹವೆಂದೋ ಮರುಳೆಂದೋ ಕರೆ. ಆದರೆ ಮಲ್ಲಿಗೆಯನ್ನು ನಾನು ಪ್ರೀತಿಸುವುದೂ, ಪ್ರತಿಯಾಗಿ ಆಕೆ ನನ್ನನ್ನು ಪ್ರೀತಿಸುವುದೂ ನಿಜ. ನೀನು ನಮ್ಮಿಬ್ಬರ ಮದುವೆಗೆ ಅನು ಮತಿಯನ್ನು ಕೊಡು. ಅದರಿಂದ ನಿನಗೆ ಒಳ್ಳೆಯದಾಗುವುದು. ನನಗೆ ತಂದೆಯ ಜಹಗೀರಿ, ಆಸ್ತಿಪಾಸ್ತಿ—ಇವು ಯಾವುವೂ ಬೇಕಾಗಿಲ್ಲ. ಅವುಗಳ ನ್ನೆಲ್ಲಾ ನೀನೇ ಪಾಲಿಸಿ ಅನುಭವಿಸುವಿಯಂತೆ. ನಾವು ಮೂವರೂ ಸೋದ ರರ ಪೈಕಿ ಉತ್ತಮ ಗುಣಗಳಿಂದ ಕೂಡಿದವನು ನೀನೊಬ್ಬ ಮಾತ್ರವಾಗಿ ದ್ದೀಯೆ. ನಾನು ಇಲ್ಲಿ ಈ ಕಾಡಿನಂಚಿನಲ್ಲಿ ಗುಡಿಸಲೊಂದನ್ನು ಕಟ್ಟಿಕೊಂಡು ಕುರಿಗಾಹಿಯಾಗಿ ಮಲ್ಲಿಗೆಯ ಸಂಗಡ ದಿನಗಳೆವೆನು."

"ಅಣ್ಣಾ, ಎಂತಹ ಮಾತುಗಳನ್ನಾಡುತ್ತೀಯೋ?" ಅಪ್ಪಾಜಿ ಮಾರ್ನು ಡಿದ. "ಅಪ್ಪನ ಜಹಗೀರಿ–ಉಂಬಳಿಗಳು ಹಿರಿಯಣ್ಣನಾದ ನಿನಗಿಂತಲೂ ಮಿಗಿಲಾದ ಸಂಪತ್ತುಗಳೇ? ಜಹಗೀರದಾರನಾಗಿ ಮೆರೆಯಬೇಕೆಂಬ ಅಭಿಲಾಷೆ ನನಗೆ ಎಳ್ಳನಿತಿಲ್ಲ. ಇನ್ನು ಮಲ್ಲಿಗೆಯನ್ನು ನೀನು ಮದುವೆಯಾಗುವ ವಿಚಾರ, ನಾಡದೇ ರಾಜ್ಯಭ್ರಷ್ಟ ದೊರೆಯ ಸನ್ನಿಧಿಯಲ್ಲಿ ಅದು ನೆರವೇರಲಿ. ಅದಕ್ಕೆ ನನ್ನ ಪೂರ್ಣ ಸಮ್ಮತಿಯಿರುತ್ತದೆ."

ಅಪ್ಪಾಜಿ ಮಲ್ಲಿಗೆಯನ್ನು ತಾನು ವಿವಾಹವಾಗಲು ಅನುಮತಿಸಿದುದನ್ನು ತಿಳಿದ ಓಬಲ ಮೇರೆಯಿಲ್ಲದ ಹರುಷದ ಕಡಲಲ್ಲಿ ತೇಲಿದ. ಅದರೊಡನೆ ನೀಲಾಂಬಿಕೆಯೊಡನೆ ತಮ್ಮನ ವಿವಾಹವೂ ಜರಗಿದ್ದರೆ ಲೇಸಾಗುತ್ತಿತ್ತು ಎಂದು ಅವನಿಗನಿಸದೆ ಇರಲಿಲ್ಲ.

ಹೂವಯ್ಯ ಅಪ್ಪಾಜಿಯ ದೇಹಸ್ಥಿತಿಯನ್ನು ಅರಿತುಕೊಂಡು ಹೋಗಲೆಂದು, ಆ ಗವಿಗೆ ಐತಂದ. ಅವನು ಅಪ್ಪಾಜಿಯ ತಳಿರ ಹಾಸಿನಮೇಲೆ ಕುಳಿತು, "ಅಪ್ಪಾಜಿ, ಹುಲಿಯುಗುರುಗಳಿಂದ ನಿನ್ನ ಎದೆ ಕ್ಷತಗೊಂಡಿದೆ. ನನಗೆ ತುಂಬಾ ಸಂಕಟವಾಗಿದೆ" ಎಂದು ಸಂಭಾಷಣೆಯನ್ನು ಪ್ರಾರಂಭಿಸಿದ.

"ನನ್ನ ಎದೆಗೆ ಗಾಯವಾಗಿಲ್ಲ. ನನ್ನ ತೋಳಿಗೆ ಗಾಯವಾದುದು."

"ನಾನು ನಿನ್ನ ಎದೆಗೇ ಗಾಯವಾಗಿದೆಯೆಂದೆ ತಿಳಿದುಕೊಂಡಿದ್ದೆ."

"ನನ್ನ ಎದೆ ಗಾಯಗೊಂಡಿದೆ ಎಂಬುದು ನಿಜ. ಆದರೆ ಅದು ಹುಲಿಯ ಉಗುರುಗಳಿಂದಲ್ಲ" ಅಪ್ಪಾಜಿ ಉಸುರಿದ. "ಆದರೆ ನನ್ನ ಹೃದಯವನ್ನು ಸೂರೆಗೊಂಡ ನೀಲಾಂಬಿಕೆಯ ದೃಷ್ಟಿಶರಗಳಿಂದ."

"ಈಗ ನೆನಪಾಯಿತು." ಹೂವಯ್ಯ ನುಡಿಗಳನ್ನು ಬೇರೊಂದು ದಾರಿಗೆ ತಿರುಗಿಸಿದ. ನಿನ್ನ ರಕ್ತವಿಲೇಪಿತ ವಸ್ತ್ರವನ್ನು ನೋಡಿದಾಗ ನಾನು ಹೇಗೆ ಮೂರ್ಛಿತಾಳಿದಂತೆ ಅಭಿನಯಿಸಿದೆನೆಂಬುದನ್ನು ನಿನ್ನಣ್ಣ ತಿಳಿಸಿದನೇ?"

"ಅಷ್ಟು ಮಾತ್ರವಲ್ಲ. ಅದಕ್ಕಿಂತಲೂ ವಿಸ್ಮಯಕಾರಿ ಸಂಗತಿಗಳನ್ನು ಅರುಹಿದ."

"ಯಾವುದದು? ಆತ ನನ್ನ ತಂಗಿಯನ್ನು ಪ್ರೀತಿಸುವ ವಿಚಾರವೇ? ನಿನ್ನ ಅಣ್ಣ ಮಹಾ ಚತುರ. ಹೆಣ್ಣು ಹೃದಯವನ್ನು ಕದಿಯುವುದರಲ್ಲಿ ನಿಪುಣನಾದ ಚೋರ. ಮಲ್ಲಿಗೆಯ ಪರಿಚಯವಾಗಿ ಒಂದು ಗಳಿಗೆ ಕಳೆಯುವುದರೊಳಗಾಗಿ ನನ್ನ ತಂಗಿಯ ಎದೆಯನ್ನು ಕದ್ದ. ಈರ್ವರೂ ಪ್ರೇಮರೋಗದ ಬಾಧೆಯಿಂದ ಮರುಳಾಗಿದ್ದಾರೆ."

"ನಾಡಿದು ಅವರೀರ್ವರ ವಿವಾಹವನ್ನು ಗುಣವರ್ಮ ದೊರೆಯ ಸನ್ನಿಧಿಯಲ್ಲಿ ಜರಗಿಸಬೇಕೆಂದು ನಾನು ನಿರ್ಧರಿಸಿದ್ದೇನೆ. ನಾಡನ್ನು ಕಳಕೊಂಡ ದೊರೆಯೇ ಕನ್ಯೆಯನ್ನು ಧಾರೆಯೆರೆದು ಕೊಡುವನು. ದೈವ ಅವರಿಗೆ ಸುಖವನ್ನೀಯುತ್ತುದನ್ನು ಕಂಡು ನನ್ನ ಎದೆ ಕರುಬುವುದು. ನೀಲಾಂಬಿಕೆಯನ್ನು ನೆನೆದು ನನ್ನ ಜೀವ ಸಂಕಟಪಡುತ್ತಿದೆ."

"ನಾಡಿದು ನಾನು ನೀಲಾಂಬಿಕೆಯ ಭೂಮಿಕೆಯನ್ನು ವಹಿಸಿ ನಿನ್ನ ಕೈಹಿಡಿದರೆ!"

"ಆದರೆ, ಈ ಪ್ರೇಮ ನಾಟಕದ ಅಭಿನಯದಿಂದ ನನ್ನ ಎದೆಗುದಿತ ಆರಲಾರದು." ಅಪ್ಪಾಜಿ ಒಂದು ನಿಟ್ಟುಸಿರನ್ನು ಹೊರಚೆಲ್ಲಿದ.

"ನಾಡಿದು ನಿನ್ನ ನೆಚ್ಚಿನ ನೀಲಾಂಬಿಕೆ ನಿನ್ನ ಕೈಹಿಡಿವ ಯೋಗವನ್ನು ನಾನು ಒದಗಿಸಿದರೆ?"

"ನಿನ್ನ ಪರಿಹಾಸ್ಯವನ್ನು ಸಾಕುಮಾಡು. ನಿನ್ನ 'ರಿ' ರಾಜ್ಯದ ಕಲ್ಪನೆಯಿಂದ ನನ್ನ ಚಿತ್ತವನ್ನು ಕೆರಳಿಸಬೇಡ. ದೂರದಲ್ಲಿ ವೀರಮರ್ಮ ದೊರೆಯ ಅರಮನೆಯಲ್ಲಿ ವಾಸಿಸುವ ನೀಲಾಂಬಿಕೆ ಈ ದಟ್ಟಡವಿಗೆ ಹೇಗೆ ಬಂದಾಳು!"

"ನನ್ನ ನುಡಿಗಳಲ್ಲಿ ನಿನಗೆ ನಂಬುಗೆಯಿಲ್ಲವೇ?" ಹೂವಯ್ಯ ಅಪ್ಪಾಜಿಯ ಕಣ್ಣುಗಳನ್ನೇ ದಿಟ್ಟಿಸಿ ನೋಡಿದ.

"ದೂರದ ಬಾನಿನಲ್ಲಿ ಬೆಳಗುವ ಚಂದ್ರನನ್ನು ಹಿಡಿದುತಂದು ಕೈಗೆ ಕೊಡುವೆನೆಂದು ಹೇಳಿದರೆ ಯಾರುತಾನೇ ನಂಬುವರು?"

"ಅಪ್ಪಾಜಿ, ನೀನು ಆಶ್ಚರ್ಯ ಚಕಿತನಾಗಬೇಡ." ಗಂಭೀರಧ್ವನಿಯಲ್ಲಿ ಹೂವಯ್ಯ ಹೇಳಿದ. "ನಾಡಿದು ನಿನ್ನ ಮನದ ಆರಾಧ್ಯದೇವತೆ ನೀಲಾಂಬಿಕೆ ಹುದುಗೂರು ಅರಣ್ಯಕ್ಕೆ ಬರುವಂತೆ ಮಾಡುವೆನು. ನನಗೆ ವಿದ್ಯಾಬುದ್ಧಿಗಳನ್ನು ಕಲಿಸಿದ ಒಬ್ಬ ಮಾವನಿದ್ದನೆಂದು ನಾನು ಹಿಂದೆಯೇ ಹೇಳಿರುವೆನಲ್ಲ. ಆ ಮಾವ ಇಂದ್ರಜಾಲ, ಮಹೇಂದ್ರಜಾಲ ಮೊದಲಾದ ತಂತ್ರವಿದ್ಯೆಗಳಲ್ಲಿಯೂ ಮಹಾ ನಿಪುಣ. ಆತನಿಂದ ನಾನು ಇಂದ್ರಜಾಲ ಮಹೇಂದ್ರಜಾಲಗಳನ್ನು ಕಲಿತಿರುವೆನು. ಈ ತಂತ್ರ ಮತ್ತು ಮಂತ್ರಶಕ್ತಿಗಳ ಪ್ರಭಾವದಿಂದ ಅರಮನೆಯಲ್ಲಿರುವ ನೀಲಾಂಬಿಕೆಯನ್ನು ನಾನು ಹುದುಗೂರು ಕಾಡಿಗೆ ಬರುವಂತೆ ಮಾಡುವೆನು. ಆಕೆ ನಾಡಿದು ಬಂದೇಬರುವಳು. ನೀನು ಮದುವೆಗೆ ಅಣಿಯಾಗು. ಇಷ್ಟಮಿತ್ರರನ್ನೆಲ್ಲಾ ಆಮಂತ್ರಿಸು. ಗುಣವರ್ಮ ದೊರೆಯನ್ನು ಕಂಡು ಅವನ ಒಪ್ಪಿಗೆಯನ್ನು ಪಡೆ. ಮಗಳನ್ನು ನಿನಗೆ ಧಾರೆಯೆರೆದು ಕೊಡುವಂತೆ ಆತನನ್ನು ಬೇಡಿಕೋ."

"ಹೂವಯ್ಯ, ನಿನ್ನ ಬುದ್ಧಿಯೇನಾದರೂ ಸಮತೆಯನ್ನು ಕಳಕೊಂಡಿಲ್ಲವಷ್ಟೆ." ಹೂವಯ್ಯನ ಮಾತುಗಳನ್ನು ನಂಬದೆ ಅಪ್ಪಾಜಿ ಪ್ರಶ್ನಿಸಿದ.

"ನಿನ್ನ ಬುದ್ಧಿಗೆ ಯಾವ ವಿಕಾರವೂ ಸೋಂಕಿಲ್ಲವಷ್ಟೆ."

"ಇಲ್ಲ. ನನ್ನ ಬುದ್ಧಿ ಸಮವಾಗಿಯೇ ಇದೆ."

"ನಿನ್ನ ಬುದ್ಧಿಯಂತೆ ನನ್ನ ಬುದ್ಧಿಗೂ ಯಾವ ಕೇಡೂ ತಟ್ಟಿಲ್ಲ." ಹೂವಯ್ಯನ ಕೊರಳಿಂದ ನಗು ಹೊಮ್ಮಿತು. "ಬೇಕಾದರೆ, ನನ್ನನ್ನು ಒಬ್ಬ ಐಂದ್ರಜಾಲಕನೆಂದು ತಿಳಿದುಕೋ. ನಾಡದು ವಿವಾಹಮುಹೂರ್ತ ಸನ್ನಿಹಿತ ವಾದಾಗ,—ತೆರೆಯುಮರೆಯಲ್ಲಿ ನಿನಗೆ ಇದಿರಾಗಿ ವಧು ನಿಂತಿರುವಳು."

"ನಾನು ಅಪಹಾಸ್ಯಕ್ಕೆ ಗುರಿಯಾದರೂ ಚಿಂತೆಯಿಲ್ಲ. ನಿನ್ನ ಮನ ಸ್ಸಂತೋಷಕ್ಕೋಸ್ಕರವಾಗಿಯಾದರೂ, ನಾನು ಮದುಮಗನಂತೆ ಸಿಂಗರಿಸಿ ಕೊಂಡು ಬರುವೆನು. ಇಷ್ಟಮಿತ್ರರನ್ನು ಆಮಂತ್ರಿಸುವೆನು. ಕನ್ಯಾದಾನ ಮಾಡಬೇಕೆಂದು ಗುಣವರ್ಮ ದೊರೆಯನ್ನು ಪ್ರಾರ್ಥಿಸುವೆನು."

ಎಂದು ಹೇಳಿ ಅಪ್ಪಾಜಿ ಹೂವಯ್ಯನ ಸೂಚನೆಯಂತೆ ನಡೆಯ ಲೊಪ್ಪಿದ.

---

## ಹತ್ತೊಂಭತ್ತು

ವೀರವರ್ಮ ದೊರೆ ಕೈಯಲ್ಲಿ ಶಾಸನದಂಡವನ್ನು ಹಿಡಿದು ರಾಜ್ಯಪಾಲನೆ ಯನ್ನು ಮಾಡುತ್ತಿದ್ದ. ದುಷ್ಟತೆಯಿಂದ ತುಂಬಿದ ಆ ನಿರಂಕುಶಾಧಿಕಾರ ಪಾಲ ನೆಗಿಂತಲೂ ಶಾಸನೆಯಲ್ಲಿ ಅಮಿತಾಸಕ್ತಿಯನ್ನು ತೋರಿಸತೊಡಗಿತು. ಪ್ರಜಾ ವರ್ಗದ ದುಃಖಸಂಕಟಗಳು ದೊರೆಯ ಕಿವಿಗೆ ಕೇಳಿಸದಾದುವು. ದೊರೆಯ ಬೊಕ್ಕಸಕ್ಕೆ ತೆರಿಗೆಗಳನ್ನು ತುಂಬುವುದು ಪ್ರಜೆಗಳ ಕೆಲಸವಾಯಿತು.

ಆದರೆ ಅರಸ ಜನರ ಬಡತನ ನಿವಾರಣೆಗೆ ಪ್ರಯತ್ನಿಸುವಂತಿಲ್ಲ; ರೋಗ ರುಜಿಗಳಿಗೆ ತುತ್ತಾದ ಜನರ ಬಾಧೆಗಳನ್ನು ಪರಿಹರಿಸಲು ವೈದ್ಯಕೀಯ ಉಪ ಚಾರಗಳ ಏರ್ಪಾಡು ಮಾಡುವಂತಿಲ್ಲ; ವ್ಯವಸಾಯಾಭಿವೃದ್ಧಿಗೆ ಕೆರೆಕುಂಟೆ ಕಾಲುವೆಗಳನ್ನು ತೋಡಿಸುವಂತಿಲ್ಲ; ಬರಗಾಲ ಬಂದಾಗ ಅರಸನ ಉಗ್ರಾಣ ದಿಂದ ಧಾನ್ಯಗಳನ್ನು ಹಂಚಿ ನೊಂದವರ ಹಸಿವೆಯನ್ನು ಕಳೆಯುವಂತಿಲ್ಲ.

ರಾಜನ ಕ್ರೂರವರ್ತನೆಗಳಿಂದ ಬೇಸತ್ತ ಪ್ರಜೆಗಳು ಪ್ರಜಾವತ್ಸಲನಾದ ಗುಣವರ್ಮನನ್ನು ಅನುದಿನ ಸ್ಮರಿಸತೊಡಗಿದರು. ಅವರು "ಹಿಂದಿನ ದೊರೆ

ನಮ್ಮೆಲ್ಲರ ತಂದೆಯಾಗಿದ್ದ. ತಂದೆಯಂತೆ ನಮ್ಮ ಸುಖಶ್ರೇಯಸ್ಸುಗಳ ಸಾಧನೆಗೆ ತನ್ನ ಬಾಳುವೆಯನ್ನು ಮೀಸಲಾಗಿರಿಸಿದ್ದ. ಇಂದಿನ ದೊರೆಯ ಪಾಲನೆ ಮಲತಾಯಿಯ ಧೋರಣೆಯಾಗಿದೆ. ಇಮ್ಮಡಿ ಮುಮ್ಮಡಿ ತೆರಿಗೆಗಳನ್ನು ರಾಜಭಂಡಾರಕ್ಕೆ ತೆತ್ತು, ಅರೆಹೊಟ್ಟೆಯಿಂದ ನರಳುವುದೇ ನಮ್ಮ ಮಹಾಭಾಗ್ಯವಾಗಿದೆ." ಎಂದು ನರಳುತ್ತಿದ್ದರು.

ಆಸ್ಥಾನದ ಸಭಿಕರು, ನಾಡಿನ ಶ್ರೀಮಂತರು ಮತ್ತು ಜಹಗೀರದಾರರು ದೊರೆಯ ದಬ್ಬಾಳಿಕೆಯನ್ನು ಕಂಡು ಬೇಸತ್ತರು. ಸಜ್ಜನರಿಗೆ ರಾಜಾಸ್ಥಾನ ಶರಳಮಂಚವಾಗಿ ಪರಿಣಮಿಸಿತು. ಹಿಂದಿನ ದೊರೆ ಗುಣವರ್ಮ ಹುದುಗೂರು ಕಾಡಿನಲ್ಲಿ ತನ್ನ ಪರಿವಾರದವರೊಡನೆ ಸುಖವಿನೋದಗಳಲ್ಲಿ ಕಾಲಹರಣ ಮಾಡುತ್ತಿದ್ದ ಕತೆಗಳು ರಾಜಾಸ್ಥಾನದ ಸಭಿಕರ ಕಿವಿಗಳಿಗೆ ಬೀಳುತ್ತಿದ್ದುವು ಅರಣ್ಯಜೀವನದ ಸೊಬಗುಬಿನದಗಳು ಅವರ ಮನಗಳನ್ನು ಸೆಳೆದುವು. ಪ್ರಜಾವತ್ಸಲನಲ್ಲದ ಅರಸನ ಓಲಗಕ್ಕಿಂತಲೂ ಕಾಡಿನ ಬದುಕೇ ಲೇಸೆಂದು ಅವರು ಎಣಿಸಿದರು. ರಾಜಾಸ್ಥಾನದಲ್ಲಿ ಸಭಿಕರು ಒಬ್ಬೊಬ್ಬರಾಗಿ ಕಾಣೆಯಾಗತೊಡಗಿದರು; ಅವರು ಹುದುಗೂರು ಅರಣ್ಯದ ಹಾದಿಯನ್ನು ಹಿಡಿಯತೊಡಗಿದರು.

ಪ್ರಜೆಗಳು ಹಿಂದಿನ ದೊರೆಯನ್ನು ಹಾಡಿ ಹೊಗಳುವುದು ವೀರವರ್ಮನ ಬಗೆಯನ್ನು ಕದಡಿತು; ಅವನ ಅಸೂಯೆಯನ್ನು ಕೆರಳಿಸಿತು. ಆಶ್ರಿತರು ಒಬ್ಬೊಬ್ಬರಾಗಿ ಪದಚ್ಯುತ ಅರಸನನ್ನು ಓಲೈಸಲೆಂದು ವಿಪಿನಕ್ಕೆ ತೆರಳುತ್ತಿರುವರೆಂಬ ವಾರ್ತೆ, ಅರಸನ ಎದೆಯಲ್ಲಿ ಹೊಗೆಯಾಡುತ್ತಿದ್ದ ವಿದ್ವೇಷಾಗ್ನಿಗೆ ಗಾಳಿಯನ್ನು ಹಾಕಿತು. ಅಣ್ಣ ಪದಚ್ಯುತನಾಗಿ ಅರಣ್ಯವಾಸಿಯಾದರೂ ಜನರು ಅವನನ್ನು ಸ್ಮರಿಸುವರು; ಹೊಗಳುವರು; ಅವನ ಊಳಿಗ ಗೈಯಲೆಂದು ಕಾಡಿನ ಹಾದಿಯನ್ನು ಹಿಡಿಯುವರು. ತಾನು ನಾಡಿನ ಪ್ರಭುವಾದರೂ ತನ್ನನ್ನು ಪ್ರಜೆಗಳು ಹೊಗಳರು; ಪ್ರೀತಿಸರು; ಆತ್ಮಸಂತೋಷದಿಂದ ತನ್ನ ಸೇವೆಯನ್ನು ಕೈಗೊಳ್ಳರು ಎಂಬುದು ವೀರವರ್ಮನಿಗೆ ಅರಿವಾಯಿತು.

ಪಿತ್ತಕಾಮಾಲೆ ರೋಗಹಿಡಿದವನಿಗೆ ಜಗವೆಲ್ಲ ಹಳದಿಯಾಗಿ ಕಾಣುವುದಂತೆ. ಅಂತೆಯೇ ದುಷ್ಟತೆ ಮತ್ತು ಮತ್ಸರಗಳಿಂದ ತುಂಬಿದ ದೊರೆಗೆ ನಾಡಿನ ಜನರೆಲ್ಲರೂ ದುಷ್ಟರಾಗಿ ಕಾಣತೊಡಗಿದರು. ಅವನ ಮನಸ್ಸು ಶಾಂತಿಯನ್ನು ಕಳೆದುಕೊಂಡು ಅಶಾಂತಿ ದುಗುಡಗಳ ತವರ್ಮನೆಯಾಗಿ ಪರಿಣಮಿಸಿತು

ತನ್ನ ಅಣ್ಣ ಗುಣವರ್ಮ ಜೀವಂತನಾಗಿರುವ ವರೆಗೆ ಜನ ಅವನ ಸ್ತುತಿಯನ್ನು ನಿಲ್ಲಿಸರು. ಆಶ್ರಿತರು ಕಾಡಿನಲ್ಲಿಯಾದರೂ ಅವನನ್ನು ಓಲೈಸುವುದನ್ನು ಬಿಡರು. ಅವನನ್ನೇ ಇಲ್ಲವಾಗಿಸಿದರೆ ಜನರು ಯಾರನ್ನು ಹೊಗಳುವರು? ಯಾರನ್ನು ಓಲೈಸುವರು? ತನ್ನ ಮನಸ್ಸಿನ ಅಶಾಂತಿ ದುಗುಡಗಳಿಗೆ ಕಾರಣಭೂತನಾದ ಆತನನ್ನೇ ಇಲ್ಲವಾಗಿಸುವುದು ಲೇಸು. ಎಂದು ಅರಸನ ದುಷ್ಟಬುದ್ಧಿ ಆಲೋಚಿಸಿತು.

ವೀರವರ್ಮ ತನ್ನ ಅಣ್ಣನನ್ನು ಇಲ್ಲವಾಗಿಸಬೇಕೆಂದು ನಿರ್ಧಾರಮಾಡಿದ. ಮನದ ನಿರ್ಧಾರವನ್ನು ಕಾರ್ಯರೂಪಕ್ಕೆ ತರಲು ಬೇಕಾದ ಸನ್ನಾಹಗಳನ್ನು ಮಾಡತೊಡಗಿದ. ಅವನು ದೊಡ್ಡದೊಂದು ಸೇನೆಯನ್ನು ಕಟ್ಟಿದ. ದಂಡಯಾತ್ರೆಗೆ ಅಣಿಗೈದ.

ಅರಸು ಹಗೆಗಳ ನಾಡಿನ ಮೇಲೆ ದಂಡೆತ್ತಿ ಹೋಗುವುದು ನಡೆದುಬಂದ ರೂಢಿ. ಆದರೆ ವೀರವರ್ಮ ಈ ಸಂಪ್ರದಾಯಕ್ಕೆ ವ್ಯತಿರಿಕ್ತವಾಗಿ ಕಾಡಿನ ಮೇಲೆ ದಂಡೆತ್ತಿಹೋದ. ಅವನು ಹಲವು ದಿನಗಳ ಪ್ರಯಾಣವನ್ನು ಕೈಗೊಂಡು ಹುದುಗೂರು ಅಡವಿಯ ಗಡಿಯನ್ನು ಸೇರಿದ.

ಕಾಡ ಅಂಚಿನಲ್ಲಿ ಕೆಲವು ಮಂದಿ ವಟುಗಳು ದರ್ಭೆಯನ್ನು ಕೊಯ್ಯುತ್ತಿದ್ದರು. ಇನ್ನು ಕೆಲವರು ಸಮಿಧೆಗಳನ್ನು ಸಂಗ್ರಹಿಸುತ್ತಿದ್ದರು. ಅವರನ್ನು ನೋಡಿದ ರಾಜ, "ನೀವಾರು" ಎಂದು ಪ್ರಶ್ನಿಸಿದ.

"ನಾವು ಜಾತವೇದ ಮುನಿಗಳ ಶಿಷ್ಯರು." ವಟುಗಳು ಉತ್ತರಿಸಿದರು. "ಇಲ್ಲಿ ಸಮೀಪದಲ್ಲಿಯೇ ಅವರ ಆಶ್ರಮವಿದೆ. ಅವರ ಅಪ್ಪಣೆಯಂತೆ ಹೋಮಕ್ಕೆ ಅಗತ್ಯವೆನಿಸಿದ ದರ್ಭೆ ಸಮಿಧೆಗಳನ್ನು ಕೊಂಡುಹೋಗಲು ಬಂದಿದ್ದೇವೆ."

ಮುನಿಗಳ ದರ್ಶನಮಾಡಿ, ಅವರ ಅಡಿಗಳಲ್ಲಿ ಭಕ್ತಿಗೌರವಗಳನ್ನು ನಿವೇದಿಸಿ, ಅವರ ಆಶೀರ್ವಚನವನ್ನು ನೆತ್ತಿಯಲ್ಲಾಂತು, ಮುಂದೆ ತೆರಳುವುದು ಸೂಕ್ತವೆಂದೂ, ಮಂಗಳಕರವೆಂದೂ ದೊರೆ ಭಾವಿಸಿದ. ಅವನು ಮುನಿಶಿಷ್ಯರನ್ನು ಉದ್ದೇಶಿಸಿ, "ಮುನಿಗಳ ಆಶ್ರಮವನ್ನು ತೋರಿಸಿರಿ, ಅವರಿಗೆ ನನ್ನ ಭಕ್ತಿಪೂರ್ವಕ ನಮಸ್ಕಾರಗಳನ್ನು ಅರ್ಪಿಸಿ ಮುಂತೆರಳುವೆನು" ಎಂದು ಹೇಳಿದ.

ಅರಸನು ತನ್ನ ದಂಡನ್ನು ಅಲ್ಲಿಯೇ ವಿಶ್ರಮಿಸಿಕೊಳ್ಳಲು ಆಜ್ಞಾಪಿಸಿದ. ತಾನು ಮುನಿಶಿಷ್ಯರೊಡನೆ ತಪೋವನವನ್ನು ಪ್ರವೇಶಿಸಿದ. ಮುನಿಗಳು

ತಮ್ಮ ಸಂಧ್ಯಾಕರ್ಮ ಹೋಮಾದಿಗಳನ್ನು ಮುಗಿಸಿ, ಪರ್ಣಶಾಲೆಯಲ್ಲಿ ಶಿಷ್ಯರಿಗೆ ವೇದಮಂತ್ರಗಳ ತಾತ್ಪರ್ಯವನ್ನು ವಿವರಿಸುತ್ತಾ ಕುಳಿತಿದ್ದರು.

"ನನ್ನ ಪ್ರಯಾಣ ವಿಜಯಪ್ರದವಾಗಲೆಂದು ಹರಸಿರಿ." ಎಂದು ಬಿನ್ನವಿಸುತ್ತಾ ದೊರೆ ಮುನಿಗಳ ಅಡಿಗೆ ಎರಗಿದ.

"ನೀನು ದುಷ್ಟವೂ ಅಧರ್ಮವೂ ಆದ ಒಂದು ಕಾರ್ಯಸಾಧನೆಗೆ ಉದ್ಯುಕ್ತನಾಗಿ ಪ್ರಯಾಣ ಮಾಡುತ್ತಿರುವಾಗ,—ಆ ಕಾರ್ಯ ಈಡೇರಲೆಂದು ನಾನು ಹೇಗೆ ಆಶೀರ್ವದಿಸಲಿ?"

ಜಾತವೇದ ಮುನಿಗಳು ರಾಜನ ಮೊಗದಿಂದ ದೃಷ್ಟಿತೆಗೆಯದೆ ಪ್ರಶ್ನಿಸಿದರು. ಅವರ ತೀಕ್ಷ್ಣವಾದ ಕಣ್ಣುಗಳು ಅರಸನ ಅಂತರಂಗದೊಳಗೆ ನುಗ್ಗಿ, ಅಲ್ಲಿ ಹುದುಗಿರುವ ಅವನ ಆಶೆ ಆಕಾಂಕ್ಷೆಗಳನ್ನು ಹೆಕ್ಕಿ ತೆಗೆಯುವಂತೆ ತೋರಿದುವು.

"ನನ್ನ ಉದ್ದೇಶ ದುಷ್ಟವಾದುದೇ?"

"ನಿನ್ನ ಹೃದಯದಂತೆ ನೀನು ಕೈಗೊಂಡ ಕಾರ್ಯವೂ ಕರಾಳವಾದುದು; ಅತ್ಯಂತ ಹೇಯವಾದುದು." ಮುನಿಗಳ ಕೊರಳಿಂದ ಗಂಭೀರ ಧ್ವನಿ ಹೊರಟಿತು.

"ಅಂದರೆ?"

"ನೀನೀಗ ಸೋದರಹತ್ಯೆಯನ್ನು ಮಾಡಲೆಂದು ಪ್ರಯಾಣವನ್ನು ಕೈಗೊಂಡಿರುವೆ. ಆ ಪಾಪಕರ್ಮಕ್ಕೆ ಗೆಲುವು ದೊರೆಯಲೆಂದು ನಾನು ಎಂದಿಗೂ ಆಶೀರ್ವದಿಸೆನು."

ನಾನು ನನ್ನ ಅಣ್ಣನನ್ನು ವಧಿಸಲು ಹೊರಟಿರುವೆನೆಂಬುದು ನಿಮಗೆ ಹೇಗೆ ತಿಳಿಯಿತು?"

"ದೊರೆಯೆ, ನಿನ್ನ ಅಂತರಂಗದ ಭಾವನೆಗಳನ್ನು, ತಾಳೆಯೋಲೆಯೊಂದನ್ನು ಓದುವಂತೆ ಓದಬಲ್ಲೆ." ಮುನಿಗಳು ಮಂದಹಾಸವನ್ನು ಬೀರಿದರು. "ನೀನು ಕೈಗೊಂಡಿರುವ ಕಾರ್ಯದಿಂದ ನಿನಗೆ ಹಾನಿಯಲ್ಲದೆ ಶ್ರೇಯಸ್ಸಿಲ್ಲ."

"ಅಣ್ಣ ಜೀವಂತನಾಗಿರುವನಕ ನನ್ನ ರಾಜ್ಯ ಸ್ಥಿರವಾಗಿ ನಿಲ್ಲುವಂತಿಲ್ಲ. ನನ್ನ ಆಶ್ರಿತರು, ಸಾಮಂತರು, ನನ್ನ ಆಸ್ಥಾನವನ್ನು ತ್ಯಜಿಸಿ ಅಣ್ಣನನ್ನು ಓಲೈಸಲೆಂದು ಕಾನನಕ್ಕೆ ತೆರಳುತ್ತಿರುವರು."

"ಅದು, ನಿನ್ನ ಅಣ್ಣ ಗುಣನಡತೆಗಳಲ್ಲಿ ನಿನಗಿಂತಲೂ ಮಿಗಿಲೆಂಬುದನ್ನು ಸೂಚಿಸುತ್ತದೆ. ಆಪತ್ಕಾಲದಗಿದಾಗಲೂ ಆಶ್ರಿತರು ಯಾವಾತನನ್ನು ಹಿಂಬಾಲಿಸುವರೋ, ಆತ ಪುಣ್ಯಪುರುಷ!"

"ಅವನಿಂದ ನನಗೆ ಕೇಡಿದೆ. ಅವನಿರುವತನಕ ನನ್ನ ಸಿಂಹಾಸನ ಸ್ಥಿರವಾಗಿ ಉಳಿಯದು."

"ಈ ಸಿಂಹಾಸನ ನಿನ್ನದಾಗಿದೆಯೇ? ಅದನ್ನು ಕೇವಲ ನಿನ್ನದೆಂದು ನೀನು ಭ್ರಮಿಸುವೆ. ಹಿಂದೆ ಯಾವನಿಗೋ ಸೇರಿತ್ತು. ಮುಂದೆ ಯಾವನಿಗೋ ಸೇರಿಹೋಗುವುದು. ನಡುವೆ ಎರಡು ದಿನ ನೀನು ಗದ್ದುಗೆಯನ್ನೇರಿ ಅದು ನಿನ್ನದೇ ಆಗಿದೆಯೆಂದು ಭ್ರಮೆಗೊಂಡಿರುವೆ. ಈ ವ್ಯಾಮೋಹದಿಂದ ಸೋದರಹತ್ಯೆ ಎಂಬ ಪಾತಕವನ್ನು ಆಚರಿಸಲೂ ಉದ್ಯುಕ್ತನಾಗಿರುವೆ."

"ಈ ಸಿಂಹಾಸನ ನನ್ನದಲ್ಲವೇ?"

"ನಿನ್ನಲ್ಲಿರುವ "ನನ್ನತನ" ಹೋದರೆ ಅದು ನಿನ್ನದಲ್ಲ."

"ಸ್ವಾಮಿ, ನಿಮ್ಮ ಮಾತು ಒಂದು ಒಗಟಿನಂತಿದೆ. ಪಾಮರನಾದ ನಾನು ಅರ್ಥಮಾಡಿಕೊಳ್ಳಲಾರೆ."

"ಹಾಗಾದರೆ, ಇತ್ತ ಬಾ. ನಿನ್ನಲ್ಲಿರುವ 'ನಾನುತನ' ಬರೀ ಒಂದು ಭ್ರಮೆ, ಒಂದು ಭ್ರಾಂತಿಯೆಂಬುದನ್ನು ತೋರಿಸಿಕೊಡುವೆನು." ಎಂದು ನುಡಿದ ಮುನಿಗಳು ದೊರೆಯನ್ನು ತಮ್ಮ ಕಮಂಡಲುವಿನ ಹತ್ತಿರ ಕರೆದುಕೊಂಡುಹೋದರು.

"ಈಗ ನೀನು ಕಮಂಡಲುವಿನಲ್ಲಿ ತುಂಬಿದ ನೀರನ್ನು ನಿಟ್ಟಿಸಿನೋಡು." ಮುನಿಗಳು ಹೇಳಿದರು. "ಆ ಮೇಲೆ ಆ ನೀರಿನಲ್ಲಿ ಏನು ಕಾಣುತ್ತಿದೆಯೆಂಬುದನ್ನು ನನಗೆ ತಿಳಿಸು."

ಮುನಿಗಳ ಅಪ್ಪಣೆಯಂತೆ ರಾಜ ಕಮಂಡಲುವಿನಲ್ಲಿ ತುಂಬಿದ ನೀರನ್ನೇ ದಿಟ್ಟಿಸಿ ನೋಡತೊಡಗಿದ. ಮೊದಲು ಆ ನೀರಿನಲ್ಲಿ ಏನೂ ಕಾಣಿಸಲಿಲ್ಲ. ಆ ಮೇಲೆ ಒಂದು ದಟ್ಟವಾದ ಅಡವಿ ಕಾಣಿಸಿತು. ಅಡವಿಯಲ್ಲಿ ಬೆಳೆದುನಿಂತ ಪೊದೆಗಳ ನಡುವೆ ಅನೇಕಮಂದಿ ನುಸುಳಿಹೋಗುತ್ತಿದ್ದರು. ಮೊದಲು ಅವರು ಯಾರೆಂಬ ಗುರುತು ಸಿಗಲಿಲ್ಲ. ಅವನು ಅವರನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ, ಅವರು ಬೇರೆ ಯಾರೂ ಅಲ್ಲ; ತಾನು ಮತ್ತು ತನ್ನ ಸಂಗಡವಿರುವ ಸೈನಿಕರಾಗಿರುವರೆಂಬುದು ತಿಳಿಯಿತು. ಅವರು ಗುಡ್ಡಗಳನ್ನು

ಪಿರುತ್ತಾ ಕಣಿವೆಗಳನ್ನು ಇಳಿಯುತ್ತಾ ಬಹುದೂರ ಸಾಗಿದರು. ಕೊನೆ ಗೊಂದು ವಿಶಾಲ ವಟವೃಕ್ಷವಿರುವ ಮೈದಾನಕ್ಕೆ ಬಂದರು. ಆ ಆಲದ ಮರದ ನೆರಳಿನಲ್ಲಿ ಒಬ್ಬ ವ್ಯಕ್ತಿ ಮಲಗಿ ನಿದ್ರಿಸುತ್ತಿದ್ದ. ದೊರೆ ನಿದ್ರಾಸಕ್ತ ನಾದ ಮನುಷ್ಯನು ಯಾರೆಂದು ದಿಟ್ಟಿಸಿನೋಡಿದ. ಅವನೇ ತನ್ನ ಅಣ್ಣನಾದ ರಾಜ್ಯಭ್ರಷ್ಟ ದೊರೆ! ಇನ್ನೊಂದು ಕ್ಷಣದಲ್ಲಿ ಅಣ್ಣನನ್ನು ಕೊಲ್ಲಬೇಕೆಂದು ಕೈಯಲ್ಲಿ ಹಿಡಿದಿದ್ದ ಕರವಾಳವನ್ನು ತಾನು ಮೇಲೆತ್ತಿದ. ಇನ್ನೇನು ಅಣ್ಣನ ಕಂಠಚ್ಛೇದನ ಮಾಡಬೇಕು; ಅನಿತರಲ್ಲಿ ತನ್ನ ಕಣ್ಣುಗಳು ಅಣ್ಣನ ಮೊಗದತ್ತ ಹೊರಳಿದುವು. ಆಗ ಸೋಜಿಗ! ಮರದಡಿಯಲ್ಲಿ ಮಲಗಿ ನಿದ್ರಿಸುತ್ತಿರು ವವನು ತನ್ನ ಅಣ್ಣ ಗುಣವರ್ಮನಲ್ಲ! ತಾನೇ ಮರದಡಿಯಲ್ಲಿ ಮಲಗಿರುವ ವನು! ತನ್ನನ್ನು ನುಂಗಿ ನೊಣೆಯಲೆಂದು, ಹೆಮ್ಮರದಷ್ಟು ಉನ್ನತಾಕಾರವನ್ನು ತಾಳಿದ ಒಂದು ಮಹಾಭೂತ ಹಲ್ಲುಗಳನ್ನು ಮಸೆಯುತ್ತಾ ನಾಲಗೆಯನ್ನು ಹೊರಚಾಚಿ ನಿಂತಿದೆ! ಅದರ ಕೋರೆದಾಡೆಗಳು ತೋಳುಗಾತ್ರವಾಗಿವೆ. ಕೆಂಗಣ್ಣುಗಳಿಂದ ಮಿಂಚುಗಳು ಉದುರುತ್ತಿವೆ!

ಈ ಭಯಾನಕ ಸತ್ವವನ್ನು ಕಂಡು ವೀರವರ್ಮನ ಎದೆ ತಲ್ಲಣಿಸಿ ಹೋಯಿತು. ಆ ಮಹಾಭೂತ ನಿಜವಾಗಿಯೂ ತನ್ನನ್ನು ಸಂಹರಿಸಲು ಸಿದ್ಧ ವಾಗಿ ನಿಂತಿದೆಯೆಂದೇ ಅವನು ಭಾವಿಸಿದ. ಅವನು ಭಯಕಾತರ ಸ್ವರದಲ್ಲಿ "ಸ್ವಾಮಿ, ನನ್ನನ್ನು ಸಲಹಿರಿ; ಮಹಾಭೂತದ ಬಾಯಿಯಿಂದ ನನ್ನ ಪ್ರಾಣ ವನ್ನುಳಿಸಿರಿ; ನನಗೆ ಜೀವದಾನ ಮಾಡಿರಿ!" ಎಂದು ಆಕ್ರಂದಿಸುತ್ತಾ ನೆಲದ ಮೇಲೆ ಬಿದ್ದುಬಿಟ್ಟ.

ನೆಲದ ಮೇಲೆ ಉರುಳಿದ ದೊರೆ ಪ್ರಜ್ಞಾಶೂನ್ಯನಾದ. ಮುನಿಶಿಷ್ಯರು ಅರಸನ ಮೊಗಕ್ಕೆ ತಣ್ಣೀರೆರಚಿ ಶೈತ್ಯೋಪಚಾರಮಾಡಿದರು. ಅವರ ಉಪ ಚಾರಗಳಿಂದ ರಾಜ ಸ್ಮೃತಿತಾಳಿದ.

"ರಾಜ, ನೀನೇಕೆ ಅಷ್ಟೊಂದು ಅಂಜಿದೆ." ಮುನಿಗಳು ಪ್ರಶ್ನಿಸಿದರು,

"ಸ್ವಾಮಿ, ಒಂದು ಮಹಾಭೂತ ಹೆಮ್ಮರದಾಕಾರವನ್ನು ತಾಳಿ ನನ್ನನ್ನು ಸಂಹರಿಸಲು ಬಂದಿತು." ದೊರೆ ಕಮಂಡಲುವಿನ ನೀರಲ್ಲಿ ಕಂಡ ದೃಶ್ಯವನ್ನು ಮುನಿಗಳಿಗೆ ವಿವರಿಸಿ ಹೇಳಿದ.

"ರಾಜ, ನೀನು ಆ ಕಮಂಡಲ ಜಲದಲ್ಲಿ ಕಂಡ ಮಹಾಭೂತ ನಿನ್ನ ಲ್ಲಿಯೇ ತನ್ನ ಬೀಡನ್ನು ಬಿಟ್ಟಿದೆ. ಅದು ನಿನ್ನಲ್ಲಿ ತುಂಬಿತುಳುಕುವ

ದುಷ್ಟತೆಯಲ್ಲದೆ ಬೇರೇನೂ ಅಲ್ಲ." ಮುನಿಗಳ ತುಟಿಗಳ ಮೇಲೆ ನಗೆಯು ಮೊಗ್ಗೊಂದು ಅರಳಿ ವಿಕಾಸಗೊಂಡಿತು. "ನೀನು ಮತ್ತು ನಿನ್ನ ಅಣ್ಣ ಬೇರೆ ಬೇರೆಯಲ್ಲ. ನೀವಿಬ್ಬರೂ ಒಂದೇ ಆಗಿರುವಿರಿ. ನಿನ್ನನ್ನು ಮುಸುಕಿದ ಅಜ್ಞಾನ ನೀವೀರ್ವರೂ ಬೇರೆಬೇರೆಯೆಂಬ ಭಾವನೆಯನ್ನು ನಿನ್ನಲ್ಲಿ ಕೊನರಿ ಸಿದೆ. ನಿನ್ನ ಅಣ್ಣನಿಗೆ ನೀನೆಸಗಿದ ಪ್ರತಿಯೊಂದು ಕೇಡೂ, ಮುಂದೆ ನಿನ್ನ ಎದೆಯನ್ನು ಭೇದಿಸಲಿರುವ ಒಂದೊಂದು ಸರಳಾಗಿ ಪರಿಣಮಿಸುವುದು. ನೀನೆ ಸಗಿದ ದುಷ್ಕೃತ್ಯಗಳ ಸಮೂಹವೇ ಒಂದು ಮಹಾಭೂತದ ರೂಪವನ್ನು ತಾಳಿ ನಿನ್ನನ್ನು ಸಂಹರಿಸಬಂದಿತು. ನಿನ್ನ ಶ್ರೇಯಸ್ಸು ಅವನತಿಗಳೆರಡೂ ನಿನ್ನ ಕೈಯಲ್ಲೇ ಇವೆ."

"ಸ್ವಾಮಿನ್, ಈಗ ನಾನೇನು ಮಾಡಲಿ?" ದೊರೆ ಭಯವಿಸ್ಮಿತನಾಗಿ ಮುನಿಗಳ ಮೊಗವನ್ನು ನೋಡಿದ.

"ನನ್ನ ಸಲಹೆಯನ್ನು ನಿನಗೆ ನಾನು ಆಗಲೇ ಕೊಟ್ಟೆ." ಜಾತವೇದ ಮುನಿಗಳು ಗಂಭೀರ ಸ್ವರದಲ್ಲಿ ಹೇಳಿದರು. "ಮಾನವನ ಆಗುಹೋಗುಗಳು ಅವನ ಕೈಯಲ್ಲಿವೆ. ತನ್ನ ಭವಿತವ್ಯವನ್ನು ಅವನೇ ನಿರ್ಮಿಸಿಕೊಳ್ಳಬಲ್ಲ. ನೀನು ಉದಾತ್ತ ಚರಿತೆಯಿಂದ, ಪಾವನತರದ ಆಚರಣೆಗಳಿಂದ ದೇವತ್ವವನ್ನು ಹೊಂದಬಹುದು. ಹಾಗಲ್ಲದೆ ನೀಚತರದ ಕಾರ್ಯಗಳಿಂದ ನೀನು ರಾಕ್ಷಸ ನಾಗಲೂಬಹುದು. ತ್ಯಾಗ ಶ್ರೇಯಸ್ಸಿನ ಮಾರ್ಗ; ಭೋಗ ಅವನತಿಯ ಪಥ. \ ಇವೆರಡರಲ್ಲಿ ಬೇಕಾದುದನ್ನು ಆರಿಸಿಕೋ."

"ಸ್ವಾಮಿನ್, ಇಂದು ತಮ್ಮ ಕೃಪೆಯಿಂದ ಜ್ಞಾನೋದಯವಾಯಿತು." ರಾಜ ಮುನಿಗಳ ಅಡಿಗಳಿಗೆ ಎರಗಿದ. ತನ್ನ ಕಣ್ಣುಗಳಿಂದ ಹರಿವ ಬಾಷ್ಪ ಜಲವನ್ನು ಮುನಿಗಳ ಪಾದಗಳಿಗೆ ಅಭಿಷೇಕ ಮಾಡಿದ. "ನನ್ನ ಅಜ್ಞಾನವನ್ನು ನೀವು ನಿವಾರಿಸಿ, ನನ್ನನ್ನು ಪಾಪದ ಹಳ್ಳದಿಂದ ಮೇಲೆತ್ತಿದಿರಿ. ನನಗೆ ರಾಜ್ಯ ಬೇಡ; ಗದ್ದುಗೆ ಬೇಡ; ಸಿರಿಬೇಡ; ಸೇನೆಬೇಡ. ಎಲ್ಲವನ್ನೂ ನಾನು ತೊರೆದಿರು ವೆನು. ನಿಮ್ಮ ಶಿಷ್ಯನಾಗಿ ಈ ಅಡವಿಯಲ್ಲಿ ನಿಮ್ಮ ಪಾದಸೇವೆ ಮಾಡುತ್ತಾ ನನ್ನ ಆತ್ಮಕ್ಕೆ ಅಂಟಿದ ಪಾಪಗಳನ್ನು ತೊಳೆದುಕೊಳ್ಳುವೆನು."

ಅರಸ ಪಶ್ಚಾತ್ತಾಪದಿಂದ ಬೆಂದ ಎದೆಯವನಾದ. ತಾನು ಈ ವರೆಗೆ ಗೈದುದು ಅನ್ಯಾಯ ಅಧರ್ಮ ಎಂಬುದರ ಅರಿವು ಅವನಿಗಾಯಿತು. ಅರ ಮನೆಯ ಭೋಗಭಾಗ್ಯಗಳು ನಶ್ವರವಾದವುಗಳು ಎಂದು ಅವನಿಗನಿಸಿತು. ಅವನು ತನ್ನ ದಂಡನಾಯಕನನ್ನು ಬರಹೇಳಿದ.

"ಈ ಮಹಾಮುನಿಗಳ ದರ್ಶನ ಉಪದೇಶಶ್ರವಣಗಳಿಂದ ನನ್ನ ಹೃದಯದಲ್ಲಿ ವೈರಾಗ್ಯ ಉತ್ಪನ್ನವಾಗಿದೆ." ರಾಜ ದಂಡನಾಯಕನಿಗೆ ಹೇಳಿದ. "ನನಗೆ ರಾಜ್ಯ ಭೋಗಗಳು ಬೇಕಾಗಿಲ್ಲ. ನೀನು ಹುದುಗೂರು ಅರಣ್ಯಕ್ಕೆ ತೆರಳು. ಅಲ್ಲಿ ವನರಾಜ್ಯವಾಳುತ್ತಲಿರುವ ನನ್ನ ಅಣ್ಣನನ್ನು ಕಂಡು, ನಾನು ವೈರಾಗ್ಯ ತಾಳಿದ ವೃತ್ತಾಂತವನ್ನು ಅರುಹು. ನಾಡಿನ ಅರಸನಾಗಿ ಪ್ರಜಾಪಾಲನೆಯನ್ನು ಕೈಗೊಳ್ಳಬೇಕೆಂದು ನೀನು ಪ್ರಾರ್ಥಿಸು."

ಅರಸನ ಈ ನೂತನ ಆಜ್ಞೆಯನ್ನು ಕೇಳಿ ದಂಡನಾಯಕನಿಗೆ ಆಶ್ಚರ್ಯವಾಯಿತು. ತಾನು ಕೇಳಿದ ನುಡಿಗಳನ್ನು ಅವನು ನಂಬದಾದ. ಅಧಿಕಾರ ಮತ್ತು ಪ್ರಭುತ್ವಗಳಲ್ಲಿ ಅತಿಕಾಂಕ್ಷೆಯುಳ್ಳ ಅರಸು ಹೀಗೆ ಒಂದು ಗಳಿಗೆಯಲ್ಲಿ ಪರಿವರ್ತನೆಯನ್ನು ಹೊಂದಿದನೆಂಬುದನ್ನು ಅವನು ನಂಬದಾದ. ರಾಜನ ಮೊಗದಿಂದ ಅವನು ಕಣ್ಣು ತೆಗೆಯಲಿಲ್ಲ.

"ನೀನು ನನ್ನ ಮಾತುಗಳನ್ನು ನಂಬುವುದಿಲ್ಲ, ಅಲ್ಲವೇ? ಅದೇಕೆ ಸಂಶಯ ದೃಷ್ಟಿಯಿಂದ ನನ್ನನ್ನು ನೋಡುತ್ತಿರುವೆ? ನಾನೇನೂ ಪರಿಹಾಸಕ್ಕೋಸ್ಕರ ಈ ರೀತಿ ಹೇಳುತ್ತಲಿಲ್ಲ." ಸೇನಾಪತಿ ಮೂರ್ನುಡಿಯದುದನ್ನು ಕಂಡು ರಾಜ ಮಾತು ಮುಂದುವರಿಸಿದ." ಹೋಗು, ನೀನು ನನ್ನ ಆಜ್ಞೆಯಂತೆ ವರ್ತಿಸು. ನನ್ನ ಅಣ್ಣನಿಗೆ ನನ್ನ ಸಂದೇಶವನ್ನು ತಿಳಿಸು. ನೀನು ಅರಸನಾಗಿ ನಾಡನ್ನಾಳಬೇಕೆಂಬುದು ನನ್ನ ಇಚ್ಛೆಯಾಗಿದೆ ಎಂದು ಅರುಹು."

"ಆಗಲಿ ಮಹಾಪ್ರಭು!" ಎಂದು ದಂಡನಾಯಕ ಅರಸನ ಪಾದಗಳಿಗೆ ಮಣಿದ.

"ಸ್ವಾಮಿನ್, ನಿಮ್ಮ ದರ್ಶನದಿಂದ ನಾನು ಪುನೀತನಾದೆ." ವೀರವರ್ಮ ಜಾತವೇದ ಮುನಿಗಳ ಕಡೆ ದೃಷ್ಟಿ ಹೊರಳಿಸಿದ. "ನೀವು ನನ್ನನ್ನು ಒಬ್ಬ ಶಿಷ್ಯನನ್ನಾಗಿ ಪರಿಗ್ರಹಿಸಿರಿ. ನಿಮ್ಮ ಪಾದಸೇವೆಯನ್ನು ಮಾಡುತ್ತಾ, ಈ ತನಕ ನಾನು ಆಚರಿಸಿದ ಪಾಪಗಳನ್ನು ತೊಳೆದುಕೊಳ್ಳುವೆನು; ನಿಮ್ಮ ಅನುಗ್ರಹದ ಬೆಳಕಿನಲ್ಲಿ ನನ್ನ ಶ್ರೇಯಸ್ಸಿನ ದಾರಿಯನ್ನು ಅರಸುವೆನು."

"ರಾಜಾ, ಈ ನುಡಿಗಳು ನಿನ್ನ ಹೃದಯದ ಅಂತರಾಳದಿಂದ ಬಂದಿರುವುವಾದರೆ ನನಗೆ ಬಹು ಸಂತೋಷ." ಮುನಿಗಳು ನುಡಿದರು. "ನೀನು ನಮ್ಮ ಆಶ್ರಮದಲ್ಲಿ ಶಿಷ್ಯನಾಗಿದ್ದುಕೊಂಡು ನಿನ್ನ ಶ್ರೇಯಸ್ಸಿನ ಮಾರ್ಗವನ್ನು ಅರಸಬಹುದು."

ಅಣ್ಣನನ್ನು ವಧಿಸಿ ಸೋದರಹತ್ಯೆಯ ಪಾಪಕ್ಕೆ ಒಳಗಾಗಲೆಂದು ಅರಮನೆಯನ್ನು ತೊರೆದು ಕಾಡಿಗೆ ಹೊರಟಿದ್ದ ರಾಜ ಜಾತವೇದ ಮುನಿಗಳ ಉಪದೇಶ ಶ್ರವಣದಿಂದ ರಾಜ್ಯದಾಸೆಯನ್ನು ತೊರೆದು ಅವರ ಶಿಷ್ಯನಾದ.

---

## ಇಪ್ಪತ್ತು

ಹೂವಯ್ಯನ ನುಡಿಗಳನ್ನು ನಂಬಿದ ಅಪ್ಪಾಜಿ ಎರಡು ಮದುವೆಗಳಿಗೆ ಇರುವ ಸಿದ್ಧತೆಗಳನ್ನು ಮಾಡತೊಡಗಿದ. ಪದಚ್ಯುತ ದೊರೆಯ ಪರಿವಾರದವರನ್ನೆಲ್ಲಾ ಆಮಂತ್ರಿಸಿದ. ಗುಣವರ್ಮ ದೊರೆಯನ್ನು ಕಂಡು, ಹೂವಯ್ಯ ಹೇಳಿದ ಸಂಗತಿಗಳನ್ನೆಲ್ಲಾ ಅರಿಕೆಮಾಡಿದ.

"ಅಪ್ಪಾಜಿ, ನೀನು ನನ್ನ ಗೆಳೆಯ ರಾಚಯ್ಯನ ಮಗ. ನನ್ನ ಮಗಳು ನೀಲಾಂಬಿಕೆ ಒಪ್ಪುವುದಾದರೆ ಆಕೆಯನ್ನು ನಿನಗೆ ಮದುವೆ ಮಾಡಿಕೊಡಲು ನಾನು ಸಂತೋಷದಿಂದ ಒಪ್ಪುವೆನು." ಎಂದು ಗುಣವರ್ಮ ಹೇಳಿದ. "ಆದರೆ ರಾಜಧಾನಿಯಲ್ಲಿರುವ ನೀಲ ಇಲ್ಲಿಗೆ ಹೇಗೆ ಬರಬಲ್ಲಳು? ಅದು ಆ ಕುರುಬರ ಹೈದನ ಹುಡುಗಾಟಿಕೆಯೆಂದು ತೋರುವುದು. ಹೋಗಲಿ, ಮದುವೆಗಿರುವ ಸಿದ್ಧತೆಗಳನ್ನು ಮಾಡು. ನೀಲ ಬಾರದೆ ಹೋದರೆ, ನಿನ್ನ ಅಣ್ಣ ಓಬಲನ ಮದುವೆಯಾದರೂ ನಡೆವುದಲ್ಲ!"

"ಈ ಕಾಡಿನಲ್ಲಿ ಯಾವ ಬಗೆಯ ಸಿದ್ಧತೆಗಳನ್ನು ಅಣಿಮಾಡಲಿ ಪ್ರಭೂ!"

"ನಾಡಿನ ರೀತಿಯ ಸಂಭ್ರಮ ಕಾಡಿಗೊಪ್ಪದು." ದೊರೆ ನಗುತ್ತಾ ಹೇಳಿದ. 'ತಿಗುಳರ ನಾಡಿಗೆ ಹೋದರೆ, ತಿಗುಳನಾಗು' ಎಂಬ ಗಾದೆಯಿದೆ. ನಾವು ಅರಣ್ಯವಾಸಿಗಳು. ಕಾಡಾಡಿಗಳಿಗೊಪ್ಪುವ ರೀತಿಯಲ್ಲಿ ನಾವು ಮದುವೆ ಮಾಡಬೇಕು."

"ಕಾಡಾಡಿಗಳಿಗೊಪ್ಪುವ ರೀತಿ ಯಾವುದು?" ಎಂದು ಅಪ್ಪಾಜಿ ಚಿಂತಿಸಿದ.

"ನಾನು ಹೇಳುತ್ತೇನೆ ಕೇಳು." ಅರಸನ ಜತೆಯಲ್ಲಿದ್ದ ಗಂಗಣ್ಣ ಉಸುರಿದ. "ನಮಗೆ ಯಾವ ಆಭರಣಗಳೂ ಬೇಕಾಗಿಲ್ಲ. ಕಾಡಿನಲ್ಲಿ ಯಥೇಚ್ಛ ಹೂಗಳಿವೆ. ಹೂವಿನ ಮುಂಡಾಸ, ಹೂವಿನ ಕಡಗ, ಹೂವಿನ

ಹಾರ ಇವುಗಳಿಂದ ವಧೂವರರನ್ನು ಸಿಂಗರಿಸಿದರಾಯಿತು. "ಆದರೆ, ಅಷ್ಟೊಂದು ಹೂಗಳನ್ನು ಆರಿಸಿ ತಂದು ಮಾಲೆಗಟ್ಟಬೇಕಾದರೆ ಪ್ರಯಾಸವೇ ಸರಿ." ಎಂದು ಅಪ್ಪಾಜಿಯ ಜತೆಯಲ್ಲಿದ್ದ ಓಬಲ ಸಂದೇಹವನ್ನು ಸೂಚಿಸಿದ.

"ಅದಕ್ಕೇನು? ನಮ್ಮ ಪರಿವಾರದವರೆಲ್ಲ ಸಂಜೆ ಕಾಡೊಳಗೆ ನುಗ್ಗಿದರೆ ಬುಟ್ಟಿ, ಬುಟ್ಟಿ ಹೂ ತರಬಹುದೆ"ಂದು ಹಾಲಪ್ಪ ಹೇಳಿದ.

"ಮದುವೆ ಅಂದ ಮೇಲೆ ವಿಶೇಷದ ತಿನಸುಗಳು ಬೇಕಾಗಿಲ್ಲವೇ?" ಎಂದು ದೊರೆ ನುಡಿದ.

"ಹರಿಣ ಸಾರಂಗಗಳಿಗೆ ಈ ಕಾಡಿನಲ್ಲಿ ಕ್ಷಾಮವಿಲ್ಲ." ರಾಜಪರಿವಾರದ ಅಡುಗೆಯವನಾದ ಗಂಗಪ್ಪ ಮಾರ್ನುಡಿದ. "ನಾಲ್ಕು ಸಾರಂಗಗಳನ್ನು ಹೆಚ್ಚಿಗೆ ಹೊಡೆದರಾಯಿತು. ಹೊಳೆಯಲ್ಲಿ ಧಾರಾಳ ಮೀನು ಸಿಗುತ್ತವೆ. ಗಿಡಗಳಲ್ಲಿ ಹಲಸಿನ ಹಣ್ಣು ಮಾವಿನ ಹಣ್ಣು ತೂಗುತ್ತಿವೆ. ಸುಗ್ಗಿಯ ಕಾಲದಲ್ಲಿ ಕೂಡುಹಾಕಿದ ಜೇನು ಇನ್ನೂ ಸೋರೆ ಬುರುಡೆಗಳಲ್ಲಿ ಹಾಗೆಯೇ ಉಳಿದಿದೆ. ಎರಡು ಮದುವೆಗಳನ್ನಲ್ಲ ಹತ್ತು ಮದುವೆಗಳನ್ನು ಬೇಕಾದರೂ ಮಾಡ ಬಹುದು."

"ಮದುವೆ ಎಂದಾದ ಮೇಲೆ ಧಾರೆಯೆರೆವಾಗ, ಕೊರಳಿಗೆ ಹೂಮಾಲೆ ಹಾಕುವಾಗ ಮಂತ್ರ ಹೇಳಲು ಅಯ್ಯನವರು ಒಬ್ಬರು ಬೇಕಲ್ಲ?" ಎಂದು ಅಪ್ಪಾಜಿ ತನಗೆ ಹೊಳೆದ ಹೊಸ ತೊಡರನ್ನು ದೊರೆಯ ಮುಂದಿರಿಸಿದ.

"ಅಯ್ಯನವರಿಗೇನು ಕೊರತೆಯಿಲ್ಲ." ಗುಣವರ್ಮ ಉಸುರಿದ. "ನಮ್ಮ ಸುಬ್ಬಾ ಶಾಸ್ತ್ರಿಗಳು ಇದ್ದೇ ಇದ್ದಾರೆ ಅವರು ನನ್ನ ಜತೆಯಲ್ಲಿ ಬಂದುದು ಈಗ ಪ್ರಯೋಜನಕ್ಕೆ ಬಂತು. ಅವರು ಅಂದು ಆಸ್ಥಾನದಿಂದ ನನ್ನ ಸಂಗಡ ಹೊರಟಾಗ, "ಕಾಡಿನ ಜೀವನ ನಿಮಗೆ ಬೇಡ ಸ್ವಾಮಿ, ಅದು ತುಂಬಾ ಕಷ್ಟ." ಎಂದು ಹೇಳಿದೆ. ಆಗ ಅವರು "ಕಾಡು ನಿಮಗೇ ಹೊಸತೊ? ನಮ್ಮ ಹಿರಿಯರೆಲ್ಲ ಕಾಡಿನಲ್ಲಿಯೇ ಬದುಕಿ ಬಾಳಿದವರು." ಎಂದು ಜಂಭ ಕೊಚ್ಚಿ ದರು. ಈಗ ಇಲ್ಲಿ ಅವರು ಗೆಡ್ಡೆಗೆಣಸುಗಳನ್ನು ಮೆದ್ದು, ಹಣ್ಣುಹಂಪಲುಗಳನ್ನು ತಿಂದು ಪಡುವ ಪಾಡನ್ನು ಕಾಣುವಾಗ ನನಗೆ ಅಯ್ಯೋ ಎನಿಸುತ್ತದೆ."

"ಈಗ ಶಾಸ್ತ್ರಿಗಳಿಗೆ ಭೂರಿ ದಕ್ಷಿಣೆಯನ್ನು ಕೊಟ್ಟುಬಿಟ್ಟರಾಯಿತು." ಎಂದು ಹೇಳಿದ ಗಂಗಪ್ಪ.

ಎಲ್ಲರೂ ಸೇರಿ ಮದುವೆಯ ಸಿದ್ಧತೆಗಳನ್ನು ಆಲೋಚಿಸಿದರು. ಮದುವೆಗೆ

ಬೇಕಾದ ವಸ್ತುಗಳನ್ನು ಸಂಗ್ರಹಿಸತೊಡಗಿದರು. ಸುಬ್ಬಾ ಶಾಸ್ತ್ರಿಗಳು ಓಲೆಗರಿಯ ಪಂಚಾಂಗವನ್ನು ಪರಿಶೀಲಿಸಿ, ಮುಹೂರ್ತವಿರಿಸಿದರು.

ಮದುವೆಯ ದಿನ ಬಂತು. ವಿಸ್ತಾರವಾಗಿ ಶಾಖೆಗಳನ್ನು ಹರಹಿದ ವಟವೃಕ್ಷವೇ ಹಂದರವಾಯಿತು. ಕೊಂಬೆಗಳಲ್ಲಿ ಸಾಲಾಗಿ ಕುಳಿತ ಗಿಳಿವಿಂಡೇ ತೋರಣವಾಯಿತು. ಪಿಕಗಳ ಮಧುರಾಲಾಪ ಸ್ವನಗಳೇ ಮಂಗಳವಾದ್ಯ ಸ್ವನಗಳಾದುವು. ಮರದ ನೆರಳಲ್ಲಿ ಬೆಳೆದ ಹಚ್ಚಹಸಿರು ಹುಲ್ಲೇ ದಿಬ್ಬಣಿಗರಿಗೆ ಹಾಸಿದ ಹಸೆಯಾಯಿತು. ಅರಸನೂ ಅವನ ಪರಿವಾರದವರೂ ಅಲ್ಲಿ ಸೇರಿದರು. ಅಪ್ಪಾಜಿ ಓಬಲರು ಐತಂದರು. ಆದರೆ ವಧುಗಳೀರ್ವರೂ ಬರಲಿಲ್ಲ. ಅವರ ಆಗಮನವನ್ನು ನಿರೀಕ್ಷಿಸುತ್ತಾ ಎಲ್ಲರೂ ಮರದ ನೆರಳಲ್ಲಿ ಕುಳಿತರು.

"ಅಪ್ಪಾಜಿ, ಆ ಕುರುಬರ ಹುಡುಗನ ಮಾತನ್ನು ನೀನು ನಂಬುವಿಯಾ?" ದೊರೆ ಪ್ರಶ್ನಿಸಿದ. "ಆತ ನನ್ನ ಮಗಳನ್ನು ಈ ಕಾಡಿಗೆ ಕರೆದುಕೊಂಡು ಬರಬಲ್ಲನೇ?"

"ಕೆಲವೊಮ್ಮೆ ಅವನ ಮಾತುಗಳಲ್ಲಿ ನಂಬಿಕೆ ಹುಟ್ಟುವುದು. ಕೆಲವೊಮ್ಮೆ ಇಲ್ಲ." ಅಪ್ಪಾಜಿ ಮಾರ್ನುಡಿದ. "ಆತನ ನಿಷ್ಕಲಂಕವಾದ ಮೊಗವನ್ನು ನೋಡುವಾಗ ಆತನು ಸುಳ್ಳಾಡನು ಎಂದು ಅನಿಸುವುದು."

ಹೀಗೆ ಗುಣವರ್ಮ ದೊರೆ ಮತ್ತು ಅಪ್ಪಾಜಿ ಮಾತಾಡುತ್ತಿದ್ದಾಗ ಅಲ್ಲಿಗೆ ಹೂವಯ್ಯ ಮಲ್ಲಿಗೆಯರು ಬಂದರು. ಅವರ ಜತೆಯಲ್ಲಿ ನೀಲಾಂಬಿಕೆ ಇಲ್ಲದುದನ್ನು ಕಂಡು ಅಪ್ಪಾಜಿಯ ಹೃದಯವನ್ನು ನಿರಾಸೆ ಕವಿಯಿತು. ಕುರುಬರ ಹುಡುಗ ತನ್ನನ್ನು ಚೇಷ್ಟೆಗೆ ಈಡು ಮಾಡಿ, ಎಲ್ಲರನ್ನೂ ನಗೆಯ ಹೊನಲಲ್ಲಿ ತೇಲಿಸುವ ಒಂದು ಕುಚೋದ್ಯವನ್ನು ಹೂಡಿರುವನೆಂದು ಅವನು ಸಂಶಯವನ್ನು ತಾಳಿದ.

ಹೂವಯ್ಯ ಗುಣವರ್ಮ ದೊರೆಗೆ ಅಭಿವಾದನೆ ಮಾಡಿದ. ಅನಂತರ ಅವನು ನಗುತ್ತಾ, "ಎಲೆ ದೊರೆಯೆ, ನಾನು ನಿನ್ನ ಕುಮಾರಿಯನ್ನು ಇಲ್ಲಿಗೆ ಕರೆತಂದರೆ ಆಕೆಯನ್ನು ಅಪ್ಪಾಜಿಗೆ ಮದುವೆ ಮಾಡಿ ಕೊಡುವೆಯಾ?" ಎಂದು ಪ್ರಶ್ನಿಸಿದ.

"ನಾನು ಹಲವು ನಾಡುಗಳ ಚಕ್ರವರ್ತಿಯಾಗಿದ್ದರೂ ಸಹ ನಾನು ಆಕೆಯನ್ನು ಸಂತೋಷದಿಂದ ಅಪ್ಪಾಜಿಗೆ ಧಾರೆಯೆರೆಯುತ್ತಿದ್ದೆ." ಎಂಬ ಪ್ರತಿವಚನ ದೊರೆಯ ಕೊರಳಿಂದ ಹೊರಟಿತು.

ಈಗ ಹೂವಯ್ಯನ ದೃಷ್ಟಿ ಅಪ್ಪಾಜಿಯ ಕಡೆ ಹೊರಳಿತು. "ನಾನು ಈಗ ನೀಲಾಂಬಿಕೆಯನ್ನು ಇಲ್ಲಿಗೆ ಕರೆತಂದರೆ, ನೀನು ಆಕೆಯ ಕೈಹಿಡಿದು ವರಿಸುವಿಯೇನು?" ಎಂದು ಆತ ಅಪ್ಪಾಜಿಯನ್ನು ಕೇಳಿದ

"ನಾನು ಸಾಮ್ರಾಜ್ಯವೊಂದರ ಚಕ್ರವರ್ತಿಯೆನಿಸಿದರೂ ನಾನು ನೀಲಾಂಬಿಕೆಯನ್ನೇ ವರಿಸುವೆನು."

"ನೀವೀರ್ವರೂ ಕೊಟ್ಟ ಭಾಷೆಗಳನ್ನು ನೆನಪಿನಲ್ಲಿಟ್ಟುಕೊಳ್ಳಿರಿ." ಹೂವಯ್ಯನ ತುಟಿಗಳಿಂದ ನಗೆಯ ಮೊಗ್ಗುಗಳು ಅರಳಿ ಉದುರಿದುವು. "ನಾನು ಇಂದ್ರಜಾಲ, ಮಹೇಂದ್ರಜಾಲಗಳ ಪ್ರಭಾವದಿಂದ ಅರಮನೆಯಲ್ಲಿರುವ ನೀಲಾಂಬಿಕೆಯನ್ನು ಇಲ್ಲಿಗೆ ಕರೆತರುವೆನು. ಆಗ ನಿಮ್ಮ ನಿರ್ಧಾರಗಳು ಬದಲಾಗಕೂಡದು. ದೊರೆಯೇ, ನಿನ್ನ ಮಗಳನ್ನು ನೀನು ಅಪ್ಪಾಜಿಗೆ ಧಾರೆಯೆರೆದು ಕೊಡಬೇಕು. ಅಪ್ಪಾಜಿ, ನೀನು ದೊರೆಮಗಳನ್ನು ವರಿಸ ಬೇಕು. ಇನ್ನೊಂದು ಕ್ಷಣದಲ್ಲಿ ನಾನು ಆಕೆಯನ್ನು ಇಲ್ಲಿಗೆ ಕರೆದುಕೊಂಡು ಬರುವೆನು. ನನ್ನ ಇಂದ್ರಜಾಲ ಮಹೇಂದ್ರಜಾಲಗಳ ಪ್ರಭಾವವೇನೆಂಬುದನ್ನು ತೋರಿಸಿಕೊಡುವೆನು."

ಎಂದು ಹೇಳಿದ ಹೂವಯ್ಯ ಮಲ್ಲಿಗೆಯನ್ನು ಕರೆದುಕೊಂಡು ದಟ್ಟವಾಗಿ ಬೆಳೆದ ಪೊದೆಯೊಂದರ ಹಿಂದೆ ಮರೆಯಾದ. ಅವನು ಕಣ್ಮರೆಯಾಗುವ ತನಕ ದೊರೆ ಅವನನ್ನೇ ಎವೆಯಿಕ್ಕದೆ ನೋಡುತ್ತಿದ್ದ. ರಾಜ "ಈ ಕುರುಬರ ಹುಡುಗನ ನಿಲವು, ಆಕಾರ, ಎತ್ತರ, ಮೈಬಣ್ಣ ಇವೆಲ್ಲವುಗಳನ್ನು ನೋಡು ವಾಗ, ನೀಲಾಂಬೆಯೇ ಪುರುಷ ವೇಷವನ್ನು ತಳೆದುಬಂದಹಾಗಿದೆ." ಎಂದು ಉದ್ಗಾರವೆತ್ತಿದ.

"ಹೌದು ಮಹಾಪ್ರಭು. ನಾನು ಮೊದಲಬಾರಿ ಈತನನ್ನು ಕಂಡಾಗ, ಈತ ನೀಲಾಂಬಿಕೆಯ ಸೋದರನಿರುವನೇನೊ ಎಂದು ನನಗೆ ಭ್ರಮೆಯಾಯಿತು. ಆತನ ಮಾವ ಅವನಿಗೆ ವಿದ್ಯೆಯನ್ನೂ ಇಂದ್ರಜಾಲ ಮಹೇಂದ್ರಜಾಲಗಳನ್ನೂ ಕಲಿಸಿರುವನಂತೆ. ತನ್ನ ಮಂತ್ರತಂತ್ರಗಳ ಪ್ರಭಾವದಿಂದ ದೂರದಲ್ಲಿರುವ ರಾಜಕುಮಾರಿಯನ್ನು ಕರೆತರುವನಂತೆ. ಇದೇ ಸೋಜಿಗದ ಸಂಗತಿ." ಎಂದು ಅಪ್ಪಾಜಿ ದೊರೆಯ ಅಭಿಪ್ರಾಯವನ್ನು ಅನುಮೋದಿಸಿದ.

ಪೊದೆಗಳ ಮರೆಯನ್ನು ಸೇರಿದ ಹೂವಯ್ಯ ಮಲ್ಲಿಗೆಯರು ತಾವು ತೊಟ್ಟ ವೇಷಭೂಷಣಗಳನ್ನು ಕಳಚಿದರು. ತಾವು ಅರಮನೆಯಿಂದ ಹೊರಟು

ಬರುವಾಗ ತೊಟ್ಟಿದ್ದ ದಿವ್ಯಾಂಬರಗಳನ್ನು ಧರಿಸಿದರು. ಆಭರಣಗಳನ್ನು ತೊಟ್ಟುಕೊಂಡರು. ಹೂವಯ್ಯ ಈಗ ಇಲ್ಲವಾದ, ಅವನ ಸ್ಥಾನದಲ್ಲಿ ಅಪ್ಪಾಜಿಯ ಮನದನ್ನೆ ನೀಲಾಂಬಿಕೆ ಪ್ರತ್ಯಕ್ಷಳಾದಳು. ಕುರಿಗಾಹಿ ತರುಣಿ ಮಲ್ಲಿಗೆ, ವೀರವರ್ಮನ ಪುತ್ರಿ ಮಾದಲಾಂಬಿಕೆಯಾದಳು. ಪೊದೆಗಳ ಮರೆಯಿಂದ, ಮುಗಿಲ ತೆರೆಯನ್ನು ಓಸರಿಸಿ ತಿಂಗಳು ಹೊರಬರುವಂತೆ ದೊರೆಯ ಸನ್ನಿಧಿಗೆ ಅವರು ಬಂದರು. ಈರ್ವರು ತರುಣಿಯರೂ ದೊರೆಯ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

"ಈಸುದಿನಗಳನಕ ನಾನು ಯಾರೆಂಬುದನ್ನು ತಿಳಿಸದೆ ನಿಮಗೆ ಮೋಸ ಮಾಡಿದೆ. ನನ್ನ ಅಪರಾಧವನ್ನು ಮನ್ನಿಸಬೇಕು. ನಿಮ್ಮ ಮಮತೆಯ ಸುಧೆ ನನ್ನ ಹೃದಯವನ್ನು ತಣಿಸಲಿ!" ಎಂದು ಹೇಳುತ್ತಾ ನೀಲಾ ತಂದೆಯ ಅಡಿಗಳನ್ನು ಕಣ್ಣೀರಿಂದ ತೊಳೆದಳು.

ಪಾದಗಳಿಗೆ ಮಣಿದ ಮಗಳನ್ನು ಮೇಲಕ್ಕೆತ್ತಿದ ದೊರೆ, "ನೀಲಾ, ನಿನ್ನ ದರ್ಶನ, ನಾನು ರಾಜ್ಯವನ್ನು ಕಳಕೊಂಡ ದುಃಖವನ್ನು ಪರಿಹರಿಸಿತು." ತಂದೆ ಮಗಳ ಬೆನ್ನನ್ನು ಪ್ರೀತಿಯಿಂದ ತಡವುತ್ತಾ ಹೇಳಿದ. "ನಿನ್ನ ಬುದ್ಧಿ ಕುಶಲತೆ ನನ್ನ ಅಂತರಂಗವನ್ನು ಹಿಗ್ಗಿಸಿತು. ಅನುರೂಪನಾದ ಮತ್ತು ಯೋಗ್ಯನಾದ ವರನನ್ನು ನೀನು ಆರಿಸಿಕೊಂಡೆ. ನೀನು ಜಾಣೆ; ಅವನು ವಿನಯಸಂಪನ್ನ. ನೀನು ಚೆಲುವೆ; ಅವನು ಕೆಚ್ಚೆದೆಯ ಕಲಿ. ನಿಮ್ಮಿರ್ವರ ದಾಂಪತ್ಯ ಬಂಗಾರದ ಕುಸುಮದಲ್ಲಿ ಕಂಪು ಬೆರೆತಂತೆ ಆಗುವುದು. ನಿಮ್ಮಿರ್ವರನ್ನೂ ನಾನು ಮನಮೆಚ್ಚಿ ಹರಸುತ್ತೇನೆ."

"ಅಪ್ಪಾಜಿ, ಈಕೆ ನನ್ನ ಮುದ್ದುಮಗಳು; ನನ್ನ ಕಣ್ಮಣಿ; ಇವಳನ್ನು ನಿನ್ನ ಕೈಗೊಪ್ಪಿಸುವೆನು." ದೊರೆ ಅಪ್ಪಾಜಿಯ ಕಡೆ ತಿರುಗಿ ಹೇಳಿದ. "ನೀನು ನನಗೆ ಅಳಿಯನಾಗಿ ದೊರೆತುದು ಒಂದು ಭಾಗ್ಯವೆಂದು ಎಣಿಸುವೆನು. ನೀನು ಈಕೆಯನ್ನು ಸರಿಯಾಗಿ ನೋಡಿಕೋ."

"ಪ್ರಭೂ, ತಾವು ನನ್ನಲ್ಲಿ ಇರಿಸಿದ ನಂಬಿಕೆಗೆ ಎಂದೂ ಕುಂದು ತಾರೆನು. ನನ್ನ ಈ ತೋಳುಗಳು ಆಕೆಗೆ ಆಧಾರಗಳಾಗುವುವು." ಅಪ್ಪಾಜಿ ದೊರೆಗೆ ತಲೆಬಾಗಿದ. "ಆಕೆ ನನ್ನ ಜೀವವನ್ನು ಪುನೀತಗೊಳಿಸಬಲ್ಲ ದೇವಿಯಾಗಿರುವಳು.

ಮಾದಲಾಂಬಿಕೆ ದೊಡ್ಡಪ್ಪನ ಪಾದಗಳಿಗೆ ಇನ್ನೊಮ್ಮೆ ಮಣಿದಳು.

ದೊರೆ ಅವಳನ್ನು ಹಿಡಿಗೆತ್ತಿ "ಮಗಳೇ, ನಿನ್ನ ತ್ಯಾಗ ದೊಡ್ಡದು. ನೀಲಾಂಬಿಕೆ ಗೋಸ್ಕರ, ನೀನು ಹೆತ್ತ ತಂದೆಯನ್ನೂ ಅರಮನೆಯ ಸುಖಗಳನ್ನೂ ತೊರೆದು ಕಾಡಿಗೆ ಬಂದೆ. ಅವಳ ದುಃಖಗಳಲ್ಲಿ ಪಾಲುಗಾರಳಾದೆ. ನಿನ್ನ ಒಳ್ಳೆಯತನ ನಿನ್ನ ತಂದೆ ವೀರವರ್ಮ ಮಾಡಿದ ಎಲ್ಲಾ ಕೇಡುಗಳನ್ನೂ ನಾನು ಮರೆಯು ವಂತೆ ಮಾಡಿದೆ." ಎಂದು ಆಕೆಯ ಗುಣವನ್ನು ಮುಕ್ತಕಂಠದಿಂದ ಹೊಗಳಿದ.

"ದೊಡ್ಡಪ್ಪ, ಅಕ್ಕನ ಮುಂದೆ ನನ್ನನ್ನು ಹೊಗಳುವುದು ಸಿಂಹದ ಮುಂದೆ ಸಿಂಗಳೀಕನನ್ನು ಹೊಗಳಿದಂತಾಯಿತು." ಎಂದು ಮಾದಲಾಂಬಿಕೆ ವಿನಯ ದಿಂದ ಉತ್ತರಿಸಿದಳು. "ಅಕ್ಕನ ಸದ್ಗುಣಗಳೇ ನಾನು ತಂದೆಯನ್ನೂ ಅರ ಮನೆಯನ್ನೂ ತೊರೆಯುವಂತೆ ಮಾಡಿದುವು; ಅಕ್ಕನನ್ನು ಹಿಂಬಾಲಿಸುವಂತೆ ಮಾಡಿದುವು."

"ನಿನಗೆ ತಕ್ಕವನಾದ ವರನನ್ನೇ ನೀನು ಆರಿಸಿದೆ. ಓಬಲ ಪಶ್ಚಾತ್ತಾ ಪಾಗ್ನಿಯಲ್ಲಿ ಬೆಂದು ಬಂಗಾರವಾಗಿದ್ದಾನೆ. ಅವನ ಕೈವಿಡಿದು ನೀನು ಚಿರಕಾಲ ಸೊಗವನ್ನು ಅನುಭವಿಸು."

ಮುಂದೆ ಅಪ್ಪಾಜಿ-ನಿಲಾಂಬಿಕೆಯರ, ಓಬಲ-ಮಾದಲಾಂಬಿಕೆಯರ ವಿವಾಹಗಳು ಸುಬ್ಬಾ ಶಾಸ್ತ್ರಿಗಳ ಪೌರೋಹಿತ್ಯದಲ್ಲಿ ನಡೆದುವು. ಗುಣವರ್ಮ ದೊರೆ, ನೀಲಾಂಬಿಕೆಯನ್ನು ಅಪ್ಪಾಜಿಗೂ, ಮಾದಲಾಂಬಿಕೆಯನ್ನು ಓಬಲ ನಿಗೂ ಧಾರೆಯೆರೆದುಕೊಟ್ಟ.

ವಿವಾಹಾಂತ್ಯದಲ್ಲಿ ದೊರೆ ನಿಲಾಂಬಿಕೆಯ ಕೈಯನ್ನು ಅಪ್ಪಾಜಿಯ ಕೈಯಲ್ಲಿರಿಸಿ "ಅಪ್ಪಾಜಿ, ಈಗ ನನ್ನ ಮುದ್ದು ಮಗಳು ನಿನ್ನವಳಾದಳು. ಈಕೆ ನಿನ್ನ ಕುಲವನ್ನು ಬೆಳಗಿಸುವ ದೀಪವಾಗಲಿ." ಎಂದು ಹೇಳಿ ವಧುವನ್ನು ಒಪ್ಪಿಸಿದ.

ಅಪ್ಪಾಜಿ ದೊರೆಗೆ ನಮಿಸಿ ನೀಲಾಂಬಿಕೆಯ ಕೈಯನ್ನು ಸ್ವಹಸ್ತದಲ್ಲಿ ತೆಗೆದುಕೊಂಡ.

ದೊರೆ ಮಾದಲಾಂಬಿಕೆಯ ಕೈಯನ್ನು ಓಬಲನ ಹಸ್ತದಲ್ಲಿರಿಸಿ, "ಓಬಲ, ಈಕೆ ನನ್ನ ತಮ್ಮನ ಮಗಳು ಮಾದಲಾಂಬಿಕೆ. ಆಕೆಯನ್ನು ನಿನಗೊಪ್ಪಿಸಿ ದ್ದೇನೆ. ಅವಳನ್ನು ನೀನು ಜೀವನದ ಜತೆಗಾತಿಯಾಗಿ ಸ್ವೀಕರಿಸು. ನಿಮ್ಮ ಇಬ್ಬರ ಬಾಳುವೆ ಚೆಲುವು ನಲವುಗಳ ಆಗರವೆನಿಸಲಿ!" ಎಂದು ಹಾರೈಸಿ, ಮಾದಲೆಯನ್ನು ಓಬಲನಿಗೆ ಒಪ್ಪಿಸಿದ.

"ನಾನಿಂದು ಕೃತಾರ್ಥನಾದೆ" ಎಂದು ಹೇಳಿ ಓಬಲ ದೊರೆಯ ಅಡಿಗಳಿಗೆ ಎರಗಿದ.

ಮುಂದೆ ಸಂಭ್ರಮದ ಔತಣ ನಡೆಯಿತು. ವನದಲ್ಲಿ ದೊರಕುವ ಆಹಾರವಸ್ತುಗಳಿಂದಲೇ ಗಂಗಪ್ಪ ಔತಣದಡಿಗೆಯನ್ನು ಮಾಡಿದ್ದ. ಎಲ್ಲರೂ ಔತಣದೂಟವನ್ನು ಮನದಣಿಯೆ ಉಂಡು ವಧೂವರರಿಗೆ ಶುಭವನ್ನು ಕೋರಿದರು.

---

## ಇಪ್ಪತ್ತೊಂದು

ಔತಣದೂಟವನ್ನು ಮುಗಿಸಿ ಎಲ್ಲರೂ ಆಟ ವಿನೋದಗಳಲ್ಲಿ ಮಗ್ನರಾಗಿದ್ದರು. ಎಲ್ಲರೂ ಸಂತೋಷದಿಂದ ಇದ್ದರು. ಅನಿತರಲ್ಲಿ ಅವರಿಗೆ ವೀರವರ್ಮನ ದಂಡನಾಯಕ ಮಿತಪರಿವಾರದೊಡನೆ ಬರುವುದು ಕಾಣಿಸಿತು. ದಂಡನಾಯಕನು ಅನಿರೀಕ್ಷಿತವಾಗಿ, ಜನರೊಡನೆ ಬರುವುದನ್ನು ಕಂಡು ಎಲ್ಲರಿಗೂ ವಿಸ್ಮಯವಾಯಿತು. ಅವನು ರಾಜನ ಆದೇಶದಂತೆ ಪದಚ್ಯುತ ದೊರೆಯನ್ನೂ, ತಮ್ಮನ್ನೂ ಸೆರೆಹಿಡಿಯಲು ಬಂದಿರಬಹುದೆಂದು ಅವರು ಸಂದೇಹಾಕುಲರಾದರು. ಆದರೆ ತಾವು ಅಧಿಕ ಸಂಖ್ಯಾತರಾದುದರಿಂದ ದಂಡನಾಯಕನನ್ನು ಕದನದಲ್ಲಿ ಸೋಲಿಸಿ ಹಿಂದಕ್ಕಟ್ಟಬಹುದೆಂದು ಅವರು ಧೈರ್ಯ ತಾಳಿದರು. ಅವರ ಕೈಗಳು ಒರೆಗಳಲ್ಲಿದ್ದ ಖಡ್ಗಗಳನ್ನು ತೆಗೆದುಕೊಂಡವು.

ದೊರೆಯ ಪರಿವಾರದವರು ಯುದ್ಧಸನ್ನದ್ಧರಾದುದನ್ನು ಕಂಡು ದಂಡನಾಯಕ, "ನೀವು ಭಯಪಡಬೇಕಾದುದಿಲ್ಲ. ನಾನು ಶುಭಸಂದೇಶವನ್ನು ತಂದಿದ್ದೇನೆ. ನಾನು ನಿಮ್ಮ ಹಗೆಯಾಗಿ ಬಂದಿಲ್ಲ." ಎಂದು ಕೂಗಿ ಹೇಳಿದ.

ಅವನ ನುಡಿ ಕೆಲವು ಮಟ್ಟಿಗೆ ಅವರ ಭೀತಿಯನ್ನು ಪರಿಹರಿಸಿತು. ಅವರು ಕೈಗಳಲ್ಲಿದ್ದ ಖಡ್ಗಗಳನ್ನು ಮರಳಿ ಒರೆಗೆ ಸೇರಿಸಿದರು.

"ನೀನು ತಂದ ಸಂದೇಶವೇನು? ಎಂದು ದೊರೆಯ ಪರಿವಾರದವರೆಲ್ಲರೂ ಏಕಕಾಲದಲ್ಲಿ ಕೂಗಿದರು.

"ವೀರವರ್ಮ ದೊರೆ ನಿಮ್ಮೆಲ್ಲರನ್ನು ಸಂಹರಿಸಬೇಕೆಂದು ದೊಡ್ಡ ಸೇನೆಯನ್ನು ತೆಗೆದುಕೊಂಡು ಕಾಡಿಗೆ ಹೊರಟ." ದಂಡನಾಯಕ ದೊರೆಗೆ

ನಮಸ್ಕರಿಸಿ, ತಾನು ತಂದ ಶುಭಸಂದೇಶವನ್ನು ಅರಿಕೆಮಾಡತೊಡಗಿದ. "ಅರಣ್ಯದ ಎಲ್ಲೆಯನ್ನು ಸೇರಿದಾಗ, ಅಲ್ಲಿ ಜಾತವೇದ ಮುನಿಗಳ ಭೇಟಿ ದೊರೆಗೆ ದೊರಕಿತು. ಮುನಿಗಳೊಡನೆ ನಡೆಸಿದ ಮಾತುಕತೆಗಳಿಂದ ರಾಜನಲ್ಲಿ ಮಹತ್ತರವಾದ ಪರಿವರ್ತನೆಯಾಯಿತು."

"ಯಾವ ಬಗೆಯ ಪರಿವರ್ತನೆ ಅದು?" ದಂಡನಾಯಕನ ಮಾತುಗಳನ್ನು ಉತ್ಸುಕತೆಯಿಂದ ಆಲಿಸುತ್ತಿದ್ದ ಗುಣವರ್ಮ ಪ್ರಶ್ನಿಸಿದ.

"ಮುನಿವರ್ಯರ ದಿವ್ಯ ಸೂಕ್ತಿಗಳನ್ನು ಕೇಳಿದಾಗ ದೊರೆಗೆ ರಾಜ್ಯದ ಮೇಲಿದ್ದ ಮೋಹ ಪರಿಹಾರವಾಯಿತು." ಸೇನಾಪತಿ ಮಾತು ಮುಂದರಿಸಿದ. "ದೊರೆಗಿದ್ದ ಅಧಿಕಾರ ತೃಷ್ಣೆ ಹಿಂಗಿತು. ಮನಸ್ಸು ವೈರಾಗ್ಯವನ್ನು ತಾಳಿತು. ತಾನು ಜಾತವೇದ ಮುನಿಗಳ ಶಿಷ್ಯನಾಗಿ ತಪವನ್ನು ಆಚರಿಸಲು ನಿರ್ಧರಿಸಿದ್ದಾನೆ. ತಾವು ರಾಜಧಾನಿಗೆ ಮರಳಿ ಬಂದು ಸಿಂಹಾಸನವನ್ನೇರಿ ರಾಜ್ಯ ಪರಿಪಾಲನೆಯನ್ನು ಕೈಗೊಳ್ಳಬೇಕೆಂಬುದು ಆತನ ಅರಿಕೆಯಾಗಿದೆ. ಅದರಂತೆ ತಾವು ಬಂದು ಗದ್ದುಗೆಯನ್ನಲಂಕರಿಸಬೇಕೆಂದು ಪ್ರಜೆಗಳೆಲ್ಲರ ಪ್ರಾರ್ಥನೆಯಾಗಿದೆ."

"ಗುಣವರ್ಮ ಮಹಾರಾಜರಿಗೆ ಜಯವಾಗಲಿ!" ಎಂದು ರಾಜಪರಿವಾರ ಎತ್ತಿದ ಹರ್ಷೋದ್ಗಾರ ಕಾನನದ ಮರಗಳಲ್ಲಿ ಮಾರುಲಿಗೊಂಡಿತು.

"ಗೆಳೆಯರೇ, ನಮ್ಮ ಬಾಳುವೆಯಲ್ಲಿ ವನವಾಸವೆಂಬ ಕಾಳರಾತ್ರಿ ಮುಗಿಯಿತು. ಈಗ ಮಂಗಲ ಸುಪ್ರಭಾತ ನಮ್ಮ ಜೀವನದಲ್ಲೊದಗಿದೆ." ಅರಸ ಒಡನಾಡಿಗಳ ಮೋರೆಯನ್ನು ನಿಟ್ಟಿಸುತ್ತಾ ಹೇಳಿದ. "ಈ ವರೆಗೆ ನನ್ನ ವನವಾಸದ ಕ್ಲೇಶಗಳಲ್ಲಿ ನೀವು ಪಾಲುಗಾರರಾದಿರಿ; ಇನ್ನು ಅರಮನೆಯನ್ನು ಸೇರಿದ ಅನಂತರ, ರಾಜಾಸ್ಥಾನದ ಸುಖಮಯ ಜೀವನದಲ್ಲಿ ಪಾಲುಗಾರರಾಗಿರಿ. ವಿಪತ್ತು ವಿಪತ್ತನ್ನು ಹಿಂಬಾಲಿಸುವುದು; ಸುಖ ಸುಖವನ್ನು ಅನುಸರಿಸುವುದು ಎಂಬ ನುಡಿ ಸುಳ್ಳಲ್ಲ. ಪುತ್ರೀದರ್ಶನ ಮತ್ತು ವಿವಾಹಗಳ ಸಂತೋಷದೊಡನೆ, ರಾಜ್ಯ ಪುನರ್ಲಾಭದ ಭಾಗ್ಯವೂ ನನಗೆ ಲಭ್ಯವಾಯಿತು."

"ದೊರೆಮಗಳ ಭಾಗ್ಯ." ಸುಬ್ಬಾ ಶಾಸ್ತ್ರಿಗಳು ಉದ್ಗಾರವೆತ್ತಿದರು. "ರಾಜಕುಮಾರಿ ಅಪ್ಪಾಜಿಯು ಕೈಹಿಡಿದ ಗಳಿಗೆ ಒಳ್ಳೆಯದು."

---